# ಅಕ್ಕನ ಕುರಿತ ಕನ್ನಡ ಕಾದಂಬರಿಗಳು

ಕನ್ನಡ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ

ಸಂಶೋಧಕರು
ಜಮುನ

ಮಾರ್ಗದರ್ಶಕರು
ಡಾ|| ಡಿ.ಕೆ. ರಾಜೇಂದ್ರ



ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
೨೦೦೭-೦೮

# ಅಕ್ಕನ ಕುರಿತ ಕನ್ನಡ ಕಾದಂಬರಿಗಳು

ಕನ್ನಡ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


ಸಂಶೋಧಕರು
ಜಮುನ

ಮಾರ್ಗದರ್ಶಕರು
ಡಾ|| ಡಿ.ಕೆ. ರಾಜೇಂದ್ರ










ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
೨೦೦೭–೦೮

# ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೇ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ. ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಅಕ್ಕನ ಕುರಿತ ಕನ್ನಡ ಕಾದಂಬರಿಗಳು" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ|| ಡಿ.ಕೆ. ರಾಜೇಂದ್ರ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ: ೧೨.೦೯.೨೦೦೮

ಅಭ್ಯರ್ಥಿಯ ಸಹಿ

# ಪ್ರಮಾಣ ಪತ್ರ

ಜಮುನ ಅವರು ಕನ್ನಡ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ "ಅಕ್ಕನ ಕುರಿತ ಕನ್ನಡ ಕಾದಂಬರಿಗಳು" ಎಂಬ ನಿಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ. ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಈ ಸಂಶೋಧನಾ ಕಾರ್ಯವನ್ನು ಕೈಗೊಂಡಿದ್ದಾರೆ. ಇದು ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 12/09/08

ಮಾರ್ಗದರ್ಶಕರು
ಡಾ|| ಡಿ.ಕೆ. ರಾಜೇಂದ್ರ
ನಂ. ೪೮, 'ವಂದನ',
ಮಾರುತಿ ದೇವಸ್ಥಾನದ ರಸ್ತೆ
ಸರಸ್ವತಿಪುರಂ, ಮೈಸೂರು ೫೭೦೦೦೯

# ~ಃ ಅಕ್ಕನ ಕುರಿತ ಕನ್ನಡ ಕಾದಂಬರಿಗಳು ಃ~

## ~: ಪರಿವಿಡಿ :~





## ಅಧ್ಯಾಯ- ೦೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

'ಆರೂ ಇಲ್ಲದವಳೆಂದು ಅಳಲುಗೊಳ ಬೇಡ ಕಂಡೆಯ, ಏನೂ ಮಾಡಿದಡೆಯೂ ನಾನಂಜುವಳಲ್ಲ' ಎಂದು ಇಡೀ ಸಮಾಜಕ್ಕೆ ದಿಟ್ಟತನದ ಉತ್ತರವನ್ನು ನೀಡಿದವಳು ಅಕ್ಕಮಹಾದೇವಿ. ಕನ್ನಡ ಸಾಹಿತ್ಯ ಕಂಡ ಅಪೂರ್ವ ವ್ಯಕ್ತಿತ್ವ, ಕನ್ನಡ ಸಾಹಿತ್ಯದಲ್ಲಿ ವಚನಯುಗವು ಸಾಮಾಜಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಅನೇಕ ಬದಲಾವಣೆಗಳನ್ನು ಹೊಂದಿದಂತಹ ಕ್ರಾಂತಿಕಾರಕ ಯುಗವಾಗಿದೆ. ಈ ಯುಗದಲ್ಲಿ ಬಾಳಿ ಬದುಕಿದ್ದಲ್ಲದೆ ತಮ್ಮ ಸಾರ್ಥಕವಾದಂತಹ ಬದುಕನ್ನು ಇತರರಿಗೆ ಮಾದರಿಯಾಗುವಂತೆ ಮತ್ತು ಸೃಜನಶೀಲ ಸಾಹಿತ್ಯಕ್ಕೆ ಆಕರವಾಗುವಂತೆ ರೂಪಿಸಿಕೊಂಡ ಅನೇಕ ಚಾರಿತ್ರಿಕ ವ್ಯಕ್ತಿಗಳಲ್ಲಿ ಅಕ್ಕ ಕೂಡ ಒಬ್ಬಳು.

ವಚನ ಸಾಹಿತ್ಯ ಎಂದಾಕ್ಷಣ ಪುರುಷರಲ್ಲಿ ಮೊದಲು ನೆನಪಾಗುವ ಹೆಸರು ಬಸವಣ್ಣ. ಹಾಗೆಯೇ ಸ್ತ್ರೀಯರಲ್ಲಿ ಮೊದಲು ನೆನಪಿಗೆ ಬರುವ ಹೆಸರು ಅಕ್ಕ. ಸದ್ಯಕ್ಕೆ ಕನ್ನಡದ ಮೊಟ್ಟಮೊದಲ ಕವಯಿತ್ರಿ ಎಂಬ ಹೆಗ್ಗಳಿಕೆಗೆ ಪಾತ್ರಳಾದವಳು. ಅಲ್ಲದೆ ಜಗತ್ತಿನ ಮಹಿಳಾ ಸಾಧಕಿಯರಲ್ಲಿಯೇ ಅಗ್ರಗಣ್ಯಳಾಗಿ ಅಪೂರ್ವ ವ್ಯಕ್ತಿಯಾಗಿ ಮೆರೆದವಳು. ಹೆಣ್ತನ ಮತ್ತು ಸತೀತ್ವದ ಮಹಾಶಕ್ತಿಯ ಸಂಕೇತ ಅವಳು. ವೈರಾಗ್ಯದ ಹಂತವನ್ನು ಏರಿ ಸಾಧನೆಯ ಮುಗಿಲು ಮುಟ್ಟಿದವಳು. ಹೆಣ್ಣನ್ನು ವಿಲಾಸಿ ಬೊಂಬೆಯಲ್ಲೆಂಬುದನ್ನು ಪ್ರಪಂಚಕ್ಕೆ ತೋರಿಸಿಕೊಟ್ಟವಳು. ೧೨ ನೇ ಶತಮಾನದಲ್ಲಿ ಜನಜೀವನದಲ್ಲಿ ಅದ್ಭುತ ಕ್ರಾಂತಿಯನ್ನುಂಟುಮಾಡಿ ಅಮರರೆನಿಸಿಕೊಂಡ ಮಹೋನ್ನತ ವ್ಯಕ್ತಿಗಳಲ್ಲಿ ಅಕ್ಕಳೂ ಒಬ್ಬಳು.

ಒಂದು ಸಮಾಜ ಯಾವುದೇ ಕ್ಷೇತ್ರದಲ್ಲಿ ಸಾಧನೆಗೈದ ವ್ಯಕ್ತಿಯ ಜೀವನದ ಮೇಲೆ ಪ್ರಭಾವ ಬೀರುತ್ತದೆ. ಹಾಗೆಯೇ ವ್ಯಕ್ತಿಯ ಜೀವನವೂ ಸಮಾಜದ ಮೇಲೆ ಪ್ರಭಾವ ಬೀರುತ್ತದೆ. ವ್ಯಕ್ತಿಯನ್ನು ರೂಪಿಸಿದ ಸಮಾಜ ಕೆಲವೊಮ್ಮೆ ವ್ಯಕ್ತಿಯಿಂದಲೇ ರೂಪುಗೊಳ್ಳುತ್ತದೆ. ಇಂತಹ ಮಹಾನ್ ಚೇತನಗಳ ಜೀವನಚರಿತ್ರೆ ಸಮಾಜದ ಭಾಗವಾದ ಸಾಹಿತ್ಯದ ಮೇಲೆಯೂ ತನ್ನ ಪ್ರಭಾವವನ್ನು ಬೀರುತ್ತದೆ. ಲೋಕೋದ್ಧಾರಕ್ಕೆ ಶ್ರಮಿಸಿದ ಇಂತಹ ಮಹನೀಯರು ತಮ್ಮ ವಿಶಿಷ್ಟ ಸಾಧನೆಯಿಂದ ಸಾಹಿತ್ಯದಲ್ಲಿಯೂ ಎಡೆಪಡೆದುಕೊಳ್ಳುತ್ತಾರೆ.

ಹೀಗೆ ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಐತಿಹಾಸಿಕ ವ್ಯಕ್ತಿಯೋರ್ವಳ ಸಾಹಿತ್ಯಿಕ ಚಿತ್ರಣವಲ್ಲದೇ, ಲೌಕಿಕ ಬದುಕನ್ನು ತ್ಯಜಿಸಿ, ಆಧ್ಯಾತ್ಮಿಕ ಗುರಿಯನ್ನು ಮುಟ್ಟಿದ ಶಿವಯೋಗಿಣಿ ಅಕ್ಕನ ಜೀವನವನ್ನು ಕಾದಂಬರಿಕಾರರು ಕೃತಿಯನ್ನಾಗಿಸಿದ್ದಾರೆ. ಈ ಕೃತಿಗಳ ಅಧ್ಯಯನವೇ ಇಲ್ಲಿನ ವಸ್ತುವಾಗಿದೆ. ಅವಳ ಜೀವನದಲ್ಲಿ ನಡೆದಂತಹ ಘಟನೆಗಳು, ಅದಕ್ಕೆ ಸಂಪ್ರದಾಯವಾದಿಗಳ ವಿರೋಧ, ಅವಳ ಆಧ್ಯಾತ್ಮಿಕತೆ ಇವೇ ಮುಂತಾದ ಐತಿಹಾಸಿಕ ಅಂಶಗಳನ್ನು ಕಾದಂಬರಿಕಾರರು ಹೇಗೆ ಚಿತ್ರಿಸಿದ್ದಾರೆಂಬುದರ ಚಿಂತನೆಯ ಅಧ್ಯಯನವೇ ಇಲ್ಲಿನ ಉದ್ದೇಶವಾಗಿದೆ.

ಅಕ್ಕನ ಜೀವನದ ಬಗ್ಗೆ ಸಾಕಷ್ಟು ವಿಷಯಗಳು ಚರ್ಚೆಗೆ ಒಳಗಾಗಿವೆ. ಅಂತಹ ಚರ್ಚೆಯ ವಿಷಯಗಳಿಗೆ ಈ ಕಾದಂಬರಿಕಾರರ ಪ್ರತಿಕ್ರಿಯೆಯನ್ನು ಗುರುತಿಸುವುದು ಈ ಅಧ್ಯಯನದ ಮೂಲ ಆಶಯ. ಅಕ್ಕನನ್ನು ನಮ್ಮ ಕನ್ನಡ ಸಾಹಿತ್ಯದ ಅನೇಕ ಕವಿಗಳು ತಮ್ಮ ಕೃತಿಗಳಲ್ಲಿ ಚಿತ್ರಿಸುತ್ತಲೇ ಬಂದಿದ್ದಾರೆ. ನಡುಗನ್ನಡ ಸಾಹಿತ್ಯದಲ್ಲಿ ಹರಿಹರನಿಂದ ಮೊದಲುಗೊಂಡು ಚಾಮರಸ, ಪಾಲ್ಕುರಿಕೆ ಸೋಮನಾಥ, ಸಿದ್ದ ನಂಜೇಶ, ಚೆನ್ನ ಬಸವಾಂಕ, ಯಳಂದೂರು ಹರೀಶ್ವರ, ರಾಚಕವಿ, ವಿರೂಪಾಕ್ಷ ಪಂಡಿತ ಇವರೇ ಮುಂತಾದವರು ಅಕ್ಕನ ಜೀವನದ ಬಗ್ಗೆ ನೇರವಾಗಿ ಮತ್ತು ಪರೋಕ್ಷವಾಗಿ ಕೃತಿಗಳನ್ನು ರಚಿಸಿರುವುದನ್ನು ಕಾಣಬಹುದು. ಹಾಡುಗಬ್ಬಿಗರಿಂದ ಹಿಡಿದು ನಡುಗನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೇ, ೨೦ನೇ ಶತಮಾನದಲ್ಲಿ ಪ್ರಾರಂಭವಾದ ಹೊಸಗನ್ನಡ ಸಾಹಿತ್ಯ ಪ್ರಕಾರಗಳಾದ ಕಾವ್ಯ, ನಾಟಕ, ಪ್ರಬಂಧ, ಕಾದಂಬರಿಗಳಲ್ಲಿ ಅಕ್ಕನನ್ನು ವಸ್ತುವಾಗಿಟ್ಟುಕೊಂಡು ಕೃತಿಗಳನ್ನು ರಚಿಸಿದ್ದಾರೆ. ಇವಳನ್ನು ಕುರಿತು ಪ್ರವಚನ, ಲಾವಣಿಗಳನ್ನು ಹೇಳಿದ್ದಾರೆ. ಹೀಗೆ ಬೆಳೆದು ಬಂದ ಅಕ್ಕನ ಕುರಿತ ಸಾಹಿತ್ಯವೂ ಅವಳ ಉಜ್ವಲವಾದ ಪ್ರಕಾಶಮಾನವಾದ ಅಮೋಘವಾದ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ಈ ಮೇಲಿನ ಎಲ್ಲಾ ಹಿನ್ನೆಲೆಯಲ್ಲಿ ಕಾದಂಬರಿಕಾರರ ಮನಸ್ಸನ್ನು ಅಕ್ಕನ ಬದುಕು ಆಕರ್ಷಿಸಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಹಲವಾರು ಪ್ರಕಾರಗಳಲ್ಲಿ ಅಕ್ಕನ ವಸ್ತುವನ್ನು ಕುರಿತ ಕೃತಿಗಳು ಬಂದಿರಬಹುದು. ಆದರೆ ನನ್ನ ಅಧ್ಯಯನದ ಮಿತಿಯಲ್ಲಿದ್ದ ಮೂರು ಕಾದಂಬರಿಗಳನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದೇನೆ. ಅವುಗಳು ಬಸವರಾಜ ಕಟ್ಟೀಮನಿಯವರ “ಗಿರಿಯ ನವಿಲು”, ಹೆಚ್. ತಿಪ್ಪೇರುದ್ರಸ್ವಾಮಿಯವರ “ಕದಳಿಯ ಕರ್ಪೂರ” ಮಾತೆ ಮಹಾದೇವಿಯವರ “ತರಂಗಿಣಿ”.

ಬಸವರಾಜ ಕಟ್ಟೀಮನಿಯವರು ಪ್ರಗತಿಶೀಲ ಸಮತಾವಾದ ಕಲ್ಪನೆಯುಳ್ಳ ಲೇಖಕ. ಡಾ.ಹೆಚ್.ತಿಪ್ಪೇರುದ್ರಸ್ವಾಮಿಯವರು ವೀರಶೈವಧರ್ಮದ ಬಗ್ಗೆ ವಿಶಿಷ್ಟ ಕಾಳಜಿಯುಳ್ಳವರು. ಮಾತೆ ಮಹಾದೇವಿಯವರು ಸಾಹಿತಿ ಹಾಗೂ ಸಂನ್ಯಾಸಿನಿ. ಈ ವ್ಯಕ್ತಿತ್ವಗಳ ಹಿನ್ನೆಲೆಯಲ್ಲಿಯೇ ಅವರು ಕಾದಂಬರಿಗಳನ್ನು ರಚಿಸಿದ್ದಾರೆ. ಆದ ಕಾರಣ ಈ ಮೂವರು ಕಾದಂಬರಿಕಾರರು ಅಕ್ಕನ ವಚನಗಳನ್ನು ಅಲ್ಲದೇ ಹರಿಹರ, ಚಾಮರಸ ಹಾಗೂ ಶೂನ್ಯ ಸಂಪಾದನೆಕಾರರ ಕೃತಿಗಳನ್ನು ಆಕರವಾಗಿಟ್ಟುಕೊಂಡಿದ್ದಾರೆ. ಈ ಕಾದಂಬರಿಗಳಿಗೆ ಆಧಾರವಾಗಿರುವ ಅಕ್ಕನ ವಚನಗಳೇನೂ ಸಂಪೂರ್ಣವಾದಂತಹ ಮಾಹಿತಿಗಳನ್ನು ಒದಗಿಸಿಲ್ಲ. ಅದರಲ್ಲಿ ತನ್ನ ಲೌಕಿಕ ಬದುಕಿನ ಆಚಾರ-ವಿಚಾರಗಳನ್ನಲ್ಲದೆ, ಅಲೌಕಿಕ ವ್ಯಕ್ತಿಯ ಪ್ರೇಮವನ್ನು ವಿವರಿಸಿರುವುದನ್ನು ಹುಡುಕಿ ಸಾಧಿಸಿದಂತಹ ಪಾತ್ರವಾಗಿದೆ. ಅಕ್ಕನು ತನ್ನ ಜೀವನದಲ್ಲಿ ಬಂದಂತಹ ಸಂಪ್ರದಾಯವಾದಿಗಳ ವಿರೋಧ, ಆಧ್ಯಾತ್ಮಿಕತೆ, ಪ್ರತಿಭಟನೆ ಇವುಗಳನ್ನು ತನ್ನ ವಚನಗಳಲ್ಲಿ ನಿರೂಪಿಸಿದ್ದಾಳೆ. ಪ್ರಾಚೀನಕವಿಗಳು ಈ ವಚನಗಳನ್ನು ಆಧಾರವಾಗಿಟ್ಟುಕೊಂಡು ಕೃತಿಯನ್ನು ರಚಿಸುವಾಗ ಆಗಿರುವ ಮಾರ್ಪಾಡುಗಳೇನು? ಅವರು ಕೃತಿಯಲ್ಲಿ ಅಕ್ಕನನ್ನು ಚಿತ್ರಿಸಿರುವ ರೀತಿ ಗಮನಿಸುವುದು ನನ್ನ ನಿಬಂಧದಲ್ಲಿ ಸೇರಿದೆ.

ಈ ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ಅವಳ ಬಗ್ಗೆ ಚರ್ಚೆಯಾಗಿರುವ ವಿಷಯಗಳಿಗೆ ಒದಗಿಸಿರುವ ನ್ಯಾಯವನ್ನು ಗುರುತಿಸುವುದು ಅಲ್ಲದೆ, ಇಲ್ಲಿ ಅಕ್ಕನ ವೈಯಕ್ತಿಕ ಜೀವನವನ್ನು ಕುರಿತು ಆಗಿರುವ ಮಾರ್ಪಾಡುಗಳು ಏನು? ಎಂಬುದರತ್ತ ಗಮನ ಹರಿಸಲಾಗಿದೆ. ಈ ಕಾದಂಬರಿಗಳಲ್ಲಿ ಬಂದಿರುವ ಅಕ್ಕನ ವೈಚಾರಿಕ ಪ್ರಜ್ಞೆ, ಪ್ರತಿಭಟನೆಯ ದೃಷ್ಟಿ, ಬದುಕಿನ ನೈಜತೆಯನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶದಲ್ಲಿ ಒಳಪಟ್ಟಿದೆ. ಮುಂದೆ ಅವಳ ಬಹುಮುಖ ವ್ಯಕ್ತಿತ್ವ, ಸಾಧನೆ ಸಿದ್ಧಿಗಳನ್ನು ಹೇಗೆ ಮೂಡಿಸಿದ್ದಾರೆ ಎಂಬುದರ ಬಗ್ಗೆ ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ.

ಪ್ರಾಚೀನ ಕನ್ನಡಸಾಹಿತ್ಯವನ್ನು ಅವಲೋಕಿಸಿದಾಗ ಒಂದಲ್ಲ ಒಂದು ರೀತಿಯಲ್ಲಿ ಐತಿಹಾಸಿಕ ವ್ಯಕ್ತಿಗಳನ್ನು ಅಥವಾ ಚರಿತ್ರಾತ್ಮಕ ವ್ಯಕ್ತಿಗಳನ್ನು ಮಹಾಕಾವ್ಯ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿ ಪರೋಕ್ಷವಾಗಿ ಚಿತ್ರಿಸುತ್ತಲೇ ಬಂದಿದ್ದಾರೆ. ಅಂತಹ ಮಹಾನ್ ವ್ಯಕ್ತಿಗಳಾದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಇವರೇ ಮುಂತಾದ ಶಿವಶರಣರ ಬದುಕನ್ನು

ಅವರ ಆಧ್ಯಾತ್ಮಿಕತೆಯ ಜೀವನ ದೃಷ್ಟಿಕೋನದಿಂದ ನಿರೂಪಿಸುತ್ತಲೇ ಬಂದಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಇದು ಸಹಜವೇ ಆದರೂ ೨೦ನೇ ಶತಮಾನದಲ್ಲಿ ವಸ್ತು ವೈವಿಧ್ಯತೆಯಿಂದ ಕೂಡಿದ್ದರೂ ಅಕ್ಕನನ್ನೆ ಕುರಿತು ಕಾದಂಬರಿಯನ್ನು ರಚಿಸುವುದರ ಹಿನ್ನೆಲೆಯನ್ನು ಇಲ್ಲಿ ಚರ್ಚಿಸಲಾಗಿದೆ.

ಅಕ್ಕನ ಜೀವನ ನಿರೂಪಣೆಯಲ್ಲಿ ಸಮಸ್ಯೆಗಳೂ ಇಲ್ಲದಿಲ್ಲ. ಆಕೆ ಅವತಾರ ಸ್ತ್ರೀ ಎಂಬ ನಂಬಿಕೆ ಬಂದ ಮೇಲಂತೂ ಆಕೆಯ ಜೀವನದ ಸರ್ವಸ್ವವೂ ಅಲೌಕಿಕವೆಂಬ ಕಲ್ಪನೆ ಬಂದಿತು. ಈ ಅಲೌಕಿಕ ಅಂಶವನ್ನು ವಾಸ್ತವದ ದೃಷ್ಟಿಕೋನದಿಂದ ನಿರೂಪಿಸುವುದು ಆಯಾಯಾ ಲೇಖಕರ ನೈಪುಣ್ಯವನ್ನು ಅವಲಂಬಿಸಿದೆ. ಅಪೂರ್ವವೂ, ಅಸಾಧಾರಣವೂ ಆದ ಅಕ್ಕನ ಜೀವನವನ್ನು ನೈಜವಾದ ಕ್ರಮದಲ್ಲಿಯೇ ನಿರೂಪಿಸಿ, ಆಕೆಯ ಬಾಳಿನಲ್ಲಿ ಘಟಿಸಿದ ಅನಿರೀಕ್ಷಿತ ಆತಂಕಗಳನ್ನು ಹೇಗೆ ಎದುರಿಸಿದಳೆಂಬುದನ್ನು ಕಾವ್ಯಮಯವಾಗಿ ಚಿತ್ರಿಸಿರುವುದರಲ್ಲಿ ಹರಿಹರನೇ ಅಗ್ರಗಣ್ಯ. ಆಕೆಯ ಪೂರ್ವಾರ್ಧದ ಬದುಕಿನಲ್ಲಿ ಲೌಕಿಕ ಸಂಸಾರಕ್ಕೆ ಬಂದು ಇತಿಮಿತಿಯನ್ನು ಕಲ್ಪಿಸಿ, ಅಲ್ಲಿನ ಕ್ಲೇಶಗಳನ್ನು ಪರಿಹರಿಸಿಕೊಂಡು ಮುಂದೆ ಅನಂತವಾದ ವೈರಾಗ್ಯವನ್ನು ಹೇಗೆ ಬೆಳಗಿದಳೆಂಬ ಚಿತ್ರವನ್ನು ಹರಿಹರನು ಸಾಕಷ್ಟು ಉಜ್ವಲವಾಗಿಯೇ ತೋರಿಸಿಕೊಟ್ಟಿದ್ದಾನೆ. ಈ ಅಂಶವನ್ನೇ ಪುರಸ್ಕರಿಸಿ, ಅದರ ಆಧಾರದ ಮೇಲೆ ಕೃತಿಗಳನ್ನು ರಚಿಸಿದ್ದಾರೆ, ನಮ್ಮ ಪ್ರಸ್ತುತ ಈ ಅಧ್ಯಯನದ ಲೇಖಕರು ಇದು ಎಷ್ಟು ಸರಿ, ಎಷ್ಟು ಸರಿಯಲ್ಲ ಎಂಬುದರ ಚರ್ಚೆಯನ್ನು ಇದು ಒಳಗೊಂಡಿದೆ.

ನಮ್ಮ ಸಾಹಿತ್ಯಕಾರರು ಕೃತಿಯಲ್ಲಿ ಬಳಸಿರುವ ಭಾಷೆ, ಸನ್ನಿವೇಶಗಳ ನಿರ್ಮಾಣ, ವಸ್ತುವಿನ ಸಾರ್ಥಕತೆ, ಅದರ ಕಲಾತ್ಮಕತೆಯನ್ನು ಕುರಿತು ಚರ್ಚಿಸಲಾಗಿದೆ. ಈ ಕಾದಂಬರಿಗಳಲ್ಲಿ ಬರುವ ಅಕ್ಕನ ಬಗೆಗಿನ ವಿಷಯಗಳ ಪರಿಸ್ಪರ ವ್ಯತ್ಯಾಸ, ಮಾರ್ಪಾಡು, ಅಲ್ಲದೆ ಈ ಕಾದಂಬರಿಕಾರರು ಹೊಸದಾಗಿ ಸೇರಿಸಿರುವ ಸನ್ನಿವೇಶಗಳನ್ನು ಗುರುತಿಸುವುದು. ಹೀಗೆ ಗುರುತಿಸಿದ ವಿಷಯಗಳನ್ನು ತೌಲನಿಕವಾಗಿ ನೋಡಿ ಅದರ ಪರಿಣಾಮ, ಹೋಲಿಕೆ, ವ್ಯತ್ಯಾಸಗಳನ್ನು ಚರ್ಚಿಸುವುದಲ್ಲದೆ ಈ ಕಾದಂಬರಿಗಳ ರಚನೆ, ಸೃಜನಶೀಲ ಅಂಶಗಳನ್ನು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

~*~*~*~*~

## ಅಧ್ಯಾಯ-೨

# ಕಾದಂಬರಿಕಾರರ ಪರಿಚಯ

ಅಕ್ಕನ ಕುರಿತ ಕಾದಂಬರಿಗಳು, ಶೀರ್ಷಿಕೆಯನ್ನು ನೋಡಿದಾಗ ಅಕ್ಕನಂತಹ ಮೇರು ಶಿಖರವನ್ನು ವಸ್ತುವಾಗಿರಿಸಿಕೊಂಡು ಕಾದಂಬರಿ ರಚಿಸಿದ ಸಾಹಿತಿಗಳ ಪರಿಚಯ ಮಾಡಿಕೊಡಬೇಕಾದುದು ಈ ಅಧ್ಯಯನದಲ್ಲಿ ಪ್ರಸ್ತುತ. ಕೆಲವು ಭಾರಿ ಸಾಹಿತಿಯ ಮನೋಧರ್ಮವು ಕೃತಿಯಲ್ಲಿ ಕೆಲಸಮಾಡಿಸುತ್ತದೆ. ಆದ ಕಾರಣ ಬಸವರಾಜ ಕಟ್ಟೀಮನಿ, ಡಾ. ತಿಪ್ಪೇರುದ್ರಸ್ವಾಮಿ, ಜಗದ್ಗುರು ಮಾತೆ ಮಹಾದೇವಿ ಈ ಮೂರು ಕಾದಂಬರಿಕಾರರ ಪರಿಚಯದ ಕಿರುನೋಟ ಇಲ್ಲಿದೆ.

**ಬಸವರಾಜ ಕಟ್ಟೀಮನಿ :**

ಮೊದಲಿಗೆ ಬಸವರಾಜ ಕಟ್ಟೀಮನಿ, ಇವರು ಕನ್ನಡ ಪ್ರಗತಿಶೀಲ ಸಾಹಿತ್ಯದಲ್ಲಿ ಪ್ರಸಿದ್ಧರಾದ ಲೇಖಕರಾಗಿದ್ದಾರೆ. ಹೋರಾಟಗಾರರಾಗಿ, ಪ್ರತಿಭಟನಕಾರರಾಗಿ, ಪತ್ರಕರ್ತರಾಗಿ, ಸಾಹಿತಿಗಳಾಗಿ, ಸಮಾಜ ಸೇವಾ ಕಾರ್ಯಕರ್ತರಾಗಿ, ರಾಜಕಾರಣಿಯಾಗಿ, ಎಲ್ಲಕ್ಕೂ ಮಿಗಿಲಾಗಿ ಮಾನವತಾವಾದಿಯಾಗಿ ಅವರು ಚಿರಸ್ಮರಣೆಯರಾಗಿದ್ದಾರೆ. ಸಮಾಜದ ಪ್ರತಿಯೊಂದು ಕ್ಷೇತ್ರವೂ ಪ್ರಗತಿಯನ್ನು ಹೊಂದಬೇಕೆಂಬ ಹಂಬಲದಿಂದ ವಾಸ್ತವಿಕ ನೆಲೆಯಲ್ಲಿ ಸಾಹಿತ್ಯ ಸೃಷ್ಟಿ ಮಾಡಿದರು. ಅಲ್ಲದೆ ವೈವಿಧ್ಯಮಯವಾದ ಸಾಹಿತ್ಯಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾರೆ.

ಇವರು ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ "ಮಲಾಮಿರಡಿ" ಎಂಬ ಪುಟ್ಟ ಗ್ರಾಮದಲ್ಲಿ ಅಕ್ಟೋಬರ್ ೫, ೧೯೧೮ ರಂದು ಅಪ್ಪಣ್ಣ-ಬಾಳವ್ವ ದಂಪತಿಗಳ ಮಗನಾಗಿ ಜನಿಸಿದರು. ಬಡತನ ಮತ್ತು ಅಲೆದಾಟದ ಜೀವನದಿಂದಾಗಿ ಕೇವಲ ಹೈಸ್ಕೂಲ್ ಶಿಕ್ಷಣಕ್ಕೆ ತೃಪ್ತಿರಾಗಬೇಕಾಯಿತು. ಇವರ ಬಾಳಿಗೆ ಬರಹವೇ ನೆಲೆಯಾದುದರಿಂದ ಮುಂದೆ ವಿವಿಧ ಪತ್ರಿಕೆಗಳಲ್ಲಿ ವರದಿಗಾರರಾಗಿ, ಉಪ ಸಂಪಾದಕರಾಗಿ, ಸಂಪಾದಕರಾಗಿ ಕೆಲಸ ಮಾಡಿದರು. ಇದರ ಮೂಲಕ ಕ್ರಾಂತಿಕಾರಕ ಬರಹಗಾರರೆಂಬ ಖ್ಯಾತಿಗೂ ಪಾತ್ರರಾದವರು.

ಕಟ್ಟೀಮನಿಯವರು ಸುಮಾರು ನಲವತ್ತಕ್ಕೂ ಹೆಚ್ಚು ಕಾದಂಬರಿಗಳು, ಹತ್ತು ಕಥಾಸಂಕಲನಗಳನ್ನು, ಎರಡು ಕವನ ಸಂಕಲನಗಳನ್ನು, ಜೀವನ ಚರಿತ್ರೆ, ಮಕ್ಕಳ ಕಥಾಸಂಕಲನ, ನಾಟಕ, ಅನುವಾದ, ಪ್ರವಾಸ ಕಥನ, ಆತ್ಮಕಥೆ ಹೀಗೆ ಸುಮಾರು

ಅರವತ್ತಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿ, ಅವುಗಳನ್ನು ಸಾಹಿತ್ಯ ಪ್ರಪಂಚಕ್ಕೆ ಕೊಡುಗೆಯಾಗಿ ಕೊಟ್ಟಿದ್ದಾರೆ.

ಕಟ್ಟೀಮನಿಯವರು ಬಾಲ್ಯದಲ್ಲಿ ಅನುಭವಿಸಿದ ಬಡತನ, ಶ್ರೀಮಂತ ವರ್ಗದವರ ಶೋಷಣೆಯಿಂದಾಗಿ ಅವರಲ್ಲಿ ಒಂದು ರೀತಿಯ ಪ್ರತಿಭಟನೆ ದೃಷ್ಟಿ ಬೆಳೆಯುವುದಕ್ಕೆ ಕಾರಣವಾಗಿದೆ. ಆ ವಯಸ್ಸಿಗಾಗಲೇ ಬಡವ, ಶ್ರೀಮಂತ ವರ್ಗಗಳ ಅಂತರಂಗ ಸ್ಪಷ್ಟ ಅರಿವು ಅವರಿಗಿತ್ತು. ಅವರ ಬದುಕಿನಲ್ಲಿ ಇದ್ದಂತಹ ಪ್ರತಿಭಟನಾ ಮನೋಭಾವ ಸಾಹಿತ್ಯದಲ್ಲಿಯೂ ಪ್ರಕಟಗೊಂಡಿತು.

ಕಟ್ಟೀಮನಿಯವರಿಗೆ ತಾವು ಕಂಡ ಸಮಾಜವನ್ನು ಖಂಡಿಸುವುದಕ್ಕಾಗಿಯೇ ಸಾಹಿತ್ಯವನ್ನು ಬಳಸಿಕೊಳ್ಳುವ ಹಠ ತೊಟ್ಟವರು. ಅವರಿಗೆ ಸಾಹಿತ್ಯ ಕೃತಿಗಳು ಕೇವಲ ಕಲಾಕೃತಿಯಾಗಿ ವಿಜೃಂಭಿಸುವುದು ಬೇಕಿರಲಿಲ್ಲ. ಸಮಾಜದ ದಿನ ನಿತ್ಯದ ವ್ಯವಹಾರಗಳನ್ನು ಚಿತ್ರಿಸುವುದರ ಮೂಲಕ ಅವುಗಳನ್ನು ಪ್ರತ್ಯೇಕಿಸುವುದು ಅವರ ಗುರಿಯಾಗಿತ್ತು. 'ಸ್ವಾತಂತ್ರ್ಯದೆಡೆಗೆ', 'ಮಾಡಿ ಮಡಿದವರು' ಕಾದಂಬರಿಗಳಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ನಿರೂಪಿಸಿದ್ದಾರೆ. ಈ ಕೃತಿಗಳಲ್ಲಿ ಇರುವಷ್ಟೇ ಆವೇಶವನ್ನು 'ಮೋಹದ ಬಲೆಯಲ್ಲಿ', 'ಜರತಾರಿಜಗದ್ಗುರು', 'ನೀ ನನ್ನ ಮುಟ್ಟಬೇಡ', 'ಜನಿವಾರ ಶಿವದಾರ' ದಂತಹ ಕಾದಂಬರಿಗಳಲ್ಲಿ ಸಮಾಜದ ಹುಳುಕುಗಳನ್ನು ಅನಾವರಣಗೊಳಿಸುವುದರಲ್ಲಿ ತೋರಿದ್ದಾರೆ.

ಧಾರ್ಮಿಕ ಆಚರಣೆಯ ಢಾಂಬಿಕತೆ ಮತ್ತು ಸಾಮಾಜಿಕ ಅಸಮಾನತೆಗಳ ಖಂಡನೆಯನ್ನು ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಕೆಲವು ಕಾದಂಬರಿಕಾರರು ವೈಯಕ್ತಿಕ ಕಾಮನೆಗಳ ವರ್ಣರಂಜಿತ ಚಿತ್ರಣವನ್ನು ಕೃತಿಗಳಲ್ಲಿ ಮೂಡಿಸಿದರು. ಇಂತಹ ಸಮಕಾಲೀನ ಜನಪ್ರಿಯ ಕಾದಂಬರಿಗಳ ಬಗ್ಗೆ ವಿರೋಧವನ್ನು ಕೂಡ ವ್ಯಕ್ತಪಡಿಸಿದ್ದಾರೆ. ಸಮತವಾದವನ್ನು ಬಲವಾಗಿ ನಂಬಿದ್ದ ಇವರು ಸಾಮಾಜಿಕ ಅನಿಷ್ಟಗಳಿಗೆ ಸಮತಾವಾದ ಸರಿಯಾದ ಪರಿಹಾರವೆಂದು ನಂಬಿ ಕೃತಿ ರಚನೆ ಮಾಡಿದರು.

ಒಟ್ಟಾರೆಯಾಗಿ ಕಟ್ಟೀಮನಿಯವರು ತಮ್ಮ ಕಾದಂಬರಿಗಳನ್ನು ತಾವು ಕಂಡ ಮತ್ತು ನಂಬಿದ್ದ ರೀತಿಯಲ್ಲಿ ಸಮಾಜವನ್ನು ಅರ್ಥೈಸುವುದಕ್ಕೆ ಹಠತೊಟ್ಟವರಂತೆ ಬಳಸಿಕೊಂಡರು. ಪ್ರಗತಿಶೀಲತೆಯ ಗುಣ ದೋಷಗಳೆಲ್ಲವನ್ನು ಅವರ ಕೃತಿಗಳು ಮೈಗೂಡಿಸಿಕೊಳ್ಳುವುದು ಅನಿವಾರ್ಯವಾಯಿತು.

## ಡಾ. ಹೆಚ್. ತಿಪ್ಪೇರುದ್ರಸ್ವಾಮಿ.

ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಮಹತ್ವಪೂರ್ಣ ಸಾಹಿತಿಗಳಲ್ಲಿ ಒಬ್ಬರು. ಕನ್ನಡದ ಘನತೆಯನ್ನು ರಾಷ್ಟ್ರಮಟ್ಟಕ್ಕೇರಿಸಿದ ಘನ ವಿದ್ವಾಂಸರು. ಸುಮಾರು ನಲವತ್ತಕ್ಕೂ ಹೆಚ್ಚಿನ ಸತ್ವಪೂರ್ಣವೂ, ವೈಚಾರಿಕವೂ ಸಂಶೋಧನಾತ್ಮಕವೂ ಆದ ಕೃತಿಗಳಿಂದ ಸರ್ವಭಾಷಾಮಯಿ ಸರಸ್ವತಿಯ ಮಡಿಲ ತುಂಬಿದವರು. ಕಾವ್ಯ, ನಾಟಕ, ಕಾದಂಬರಿ, ಕಥೆ, ವಿಮರ್ಶೆ, ಕಾವ್ಯ ಮೀಮಾಂಸೆ, ಸಂಶೋಧನೆ ಈ ಎಲ್ಲಾ ಪ್ರಕಾರಗಳಲ್ಲೂ ಕೃಷಿಗೈದಿರುವ ಇವರು ಪ್ರತಿಯೊಂದರಲ್ಲೂ ತಮ್ಮತನದ ಮುದ್ರೆಯನ್ನೊತ್ತಿದ್ದಾರೆ.

ಇವರು ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನಲ್ಲಿ ೧೯೨೮ ರ ಫೆಬ್ರವರಿ ೩ ರಂದು ಹುಟ್ಟಿದರು. ತಂದೆ ಚೆನ್ನಮಲ್ಲಯ್ಯ, ತಾಯಿ ಬಸಮ್ಮ, ಇವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಹೊನ್ನಾಳಿ, ಬಳಿಕ ಆನವಟ್ಟಿ, ಶಿರಾಳಕೊಪ್ಪ, ಜಡೆ ಮುಂತಾದ ಸ್ಥಳಗಳಲ್ಲಿ ನಡೆಸಿದರು. ತೀರ್ಥಹಳ್ಳಿಯಲ್ಲಿ ಪ್ರೌಢಶಾಲಾ ವಿದ್ಯಾಭ್ಯಾಸವನ್ನು , ಶಿವಮೊಗ್ಗದ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಕನ್ನಡ ಎಂ.ಎ ಪದವಿಗಳನ್ನು ಪಡೆದರು. ಇವರು ಅಧ್ಯಾಪಕರಾಗಿ ಮೈಸೂರಿನ ಮಾನಸ ಗಂಗೋತ್ರಿಯ ಸ್ನಾತಕೋತ್ತರ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ, ೧೯೮೪ ರಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ, ಇದರಿಂದ ೧೯೮೭ ರಲ್ಲಿ ಸ್ವಯಂ ನಿವೃತ್ತಿಯನ್ನು ಪಡೆದರು. ಈ ನಡುವೆಯೇ ಅವರು ಕೆಲಕಾಲ ಗಾಂಧೀಭವನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಗಳಿಗೆ ನಿರ್ದೇಶಕರಾಗಿದ್ದರು. ೧೯೯೪ ಅಕ್ಟೋಬರ್ ೨೯ ರಂದು ಸ್ವರ್ಗಸ್ಥರಾದರು.

ವಿದ್ಯಾರ್ಥಿಯಾಗಿದ್ದಾಗಲೇ ತಿಪ್ಪೇರುದ್ರಸ್ವಾಮಿಯವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದರು. 'ಗುಟ್ಟಿನ ಗಂಟು' ಎಂಬ ವ್ಯಕ್ತಿಚಿತ್ರ, 'ವಿಜಯವೀರ' ಎಂಬ ಸಣ್ಣಕಥೆ ಪ್ರಕಟವಾದ ಅವರ ಬರಹಗಳಲ್ಲಿ ಮೊದಲಿನವು. 'ಸಾಹಿತ್ಯ ಚಿತ್ರಗಳು', 'ತಪೋರಂಗ' ಎಂಬ ಹೆಸರಿನ ನಾಟಕ ಸಂಕಲನ ಮತ್ತು ಕವನ ಸಂಕಲನಗಳು ಹೊರಬಂದವು. ರಲ್ಲಿ ಅವರ 'ಭಾವಗೀತೆ' ಎಂಬ ಮೊದಲ ಕಿರುಹೊತ್ತಿಗೆ ಪ್ರಕಟವಾಯಿತು.

'ವಿಧಿ ಪಂಜರ', 'ಶರಣರ ಮೂರು ನಾಟಕಗಳು', 'ನಿಜಗುಣ ಶಿವಯೋಗಿ' ಇವು ಅವರ ನಾಟಕ ಸಾಹಿತ್ಯ. ಇದಲ್ಲದೆ 'ಕರ್ನಾಟಕ ಶರಣ ಕಥಾಮೃತ', 'ವಿವಿಧ ಶರಣರ ಜೀವನ ಚಿತ್ರಗಳು' ಸಂಕಲನ, 'ತಿಪ್ಪೇರುದ್ರ ವಚನಗಳು' ಎಂಬ ಕೃತಿಗಳನ್ನು ರಚಿಸಿದ್ದಾರೆ.

ಸೃಜನಶೀಲ ಕ್ಷೇತ್ರದಲ್ಲಿ ಕಾದಂಬರಿ ಪ್ರಕಾರ ಅವರಿಗೆ ತುಂಬ ಪ್ರಿಯವಾದ ಪ್ರಕಾರವಾಗಿದೆ. ವಿಜಯಕಲ್ಯಾಣ, ವಚನ ವಿರೂಪಾಕ್ಷ, ಸತ್ಯಾಶ್ರಯ ಸಾಮ್ರಾಜ್ಯ, ಶಿಸ್ತುಗಾರ ಶಿವಪ್ಪನಾಯಕ ಅವರ ಶುದ್ಧ ಐತಿಹಾಸಿಕ ಕಾದಂಬರಿಗಳೆಂದು ಗುರುತಿಸಬಹುದು. ಇವುಗಳು ಕ್ರಮವಾಗಿ ಪ್ರೌಢದೇವರಾಯ, ಹರಿಹರ, ಪುಲಕೇಶಿ, ಶಿವಪ್ಪನಾಯಕರಿಗೆ ಸಂಬಂಧಿಸಿದೆ. ಈ ಕಾದಂಬರಿಗಳನ್ನು ಆಯಾಯಾ ಕಾಲದ ಜನಜೀವನ, ಇತಿಹಾಸಗಳಿಗೆ ತಕ್ಕಂತೆ ನೈಜವಾಗಿ ಚಿತ್ರಿಸಿದ್ದಾರೆ.

'ನೆರಳಾಚೆಯ ಬೆಳಗು', 'ಜಡದಲ್ಲಿ ಜಂಗಮ', 'ಪರಿಪೂರ್ಣದೆಡೆಗೆ', 'ಕದಳಿಯ ಕರ್ಪೂರ', 'ಜ್ಯೋತಿ ಬೆಳಗುತಿದೆ', 'ಕರ್ತಾರನ ಕಮ್ಮಟ', ಇವು ಶಿವಶರಣರನ್ನು ಕುರಿತು ಬರೆದಂತಹ ಕಾದಂಬರಿಗಳಾಗಿವೆ. ಇವು ಕ್ರಮವಾಗಿ ಸಿದ್ಧರಾಮ, ಷಣ್ಮುಖ, ಅಲ್ಲಮಪ್ರಭು, ಅಕ್ಕಮಹಾದೇವಿ, ನಿಜಗುಣಶಿವಯೋಗಿ, ಬಸವಣ್ಣರ'ವರನ್ನು ಆಧರಿಸಿದಂತಹ ಕಾದಂಬರಿಗಳಾಗಿವೆ. ಈ ಮಹಾನ್ ಚೇತನಗಳು ತಮ್ಮ ಜೀವನ ಚರಿತ್ರೆಯನ್ನು ಎಲ್ಲಿಯೂ ಹೇಳಿಕೊಂಡಿಲ್ಲವಾದ್ದರಿಂದ ಅವರ ಜೀವನ ಚಿತ್ರಣ ದುರ್ಲಭ. ಇವರ ಜೀವನವನ್ನು ಆಧರಿಸಿ ಪ್ರಾಚೀನ ಕಾವ್ಯಗಳು ರಚಿತವಾಗಿದೆ. ಇವುಗಳನ್ನು ಆಧರಿಸಿಕೊಂಡು ತಿಪ್ಪೇರುದ್ರಸ್ವಾಮಿಯವರು ಶರಣರ ಜೀವನ ಚರಿತ್ರೆಯನ್ನು ನೈಜವಾಗಿ ಕಟ್ಟಿಕೊಡುವಂತಹ ಪ್ರಯತ್ನ ಮಾಡಿದ್ದಾರೆ. ಇವು ಶರಣರ ಜೀವನ ದರ್ಶನ, ಸಾಧನೆ, ಸಿದ್ಧಿ ಸಂದೇಶಗಳನ್ನು ಸಾರುತ್ತದೆ. ಅಲ್ಲದೇ ಶರಣರ ಅಂತರಂಗ ಬಹಿರಂಗ ಹೋರಾಟದ ಸಾಕ್ಷಾತ್ಕಾರಗಳು ವಿಶ್ವಮಾನವ ಮೌಲ್ಯಗಳಿಗೆ ಇಲ್ಲಿ ಪ್ರಾಧಾನ್ಯ ದೊರೆತಿದೆ.

ಇದಲ್ಲಕ್ಕಿಂತ ಹೆಚ್ಚಾಗಿ ವೀರಶೈವ ಧರ್ಮವನ್ನು ಕುರಿತು ಸಾಕಷ್ಟು ಅಧ್ಯಯನ ಮಾಡಿದ್ದಾರೆ. ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ 'ಶರಣರ ಅನುಭಾವ ಸಾಹಿತ್ಯ', 'ವಚನಗಳಲ್ಲಿ ವೀರಶೈವ ಧರ್ಮ', 'ವಚನ ಸಾಹಿತ್ಯ ವೈಚಾರಿಕ ಅಧ್ಯಯನ', 'ಶೂನ್ಯ ತತ್ತ್ವ ವಿಕಾಸ ಮತ್ತು 'ಶೂನ್ಯ ಸಂಪಾದನೆ', 'ಕನ್ನಡದಲ್ಲಿ ಕೈವಲ್ಯ ಸಾಹಿತ್ಯ', 'ವಚನ ಚಳವಳಿ', 'ಅವಿರಳ ಜ್ಞಾನಿ ಚನ್ನಬಸವಣ್ಣ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಈ ಧರ್ಮದ ಬಗ್ಗೆ ವಿಶೇಷವಾದ ಕಾಳಜಿ ಆಸಕ್ತಿಯನ್ನು ಕೃತಿಗಳಲ್ಲಿ ತೋರಿಸಿದ್ದಾರೆ. ಕನ್ನಡ ವಿಮರ್ಶೆಯ ದಾರಿಯಲ್ಲಿ ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ, ತೌಲನಿಕ ಕಾವ್ಯವಿಮರ್ಶೆ ಮೀಮಾಂಸೆಗಳಂತಹ ಕೃತಿಗಳ ಜೊತೆಗೆ "ಕರ್ನಾಟಕ ಸಂಸ್ಕೃತಿ ಸಮೀಕ್ಷೆ" ಎಂಬ ಮೇರು ಕೃತಿಯ ರಚಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ತಿಪ್ಪೇರುದ್ರಸ್ವಾಮಿಯವರು ಹೆಚ್ಚುಕಡಿಮೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯೂ ಕೃತಿಗಳನ್ನು ಬರೆದಿದ್ದಾರೆ. ಇವರ ಸಾಹಿತ್ಯ ಸೃಷ್ಠಿಯಲ್ಲಿ ತಪಸ್ಸು, ದರ್ಶನಗಳು ಬೆರೆತಿರುವುದು ವ್ಯಕ್ತವಾಗುತ್ತದೆ. ಇವರ ಒಂದೊಂದು ಕೃತಿಗಳು ಅತ್ಯಂತ ಶ್ರೇಷ್ಠ ಮಟ್ಟದ ಸಾಲಿನಲ್ಲಿ ನಿಲ್ಲುತ್ತದೆ. ಅವು ಸಾರ್ವಕಾಲಿಕ ಮಹತ್ವವನ್ನು ಪಡೆದುಕೊಂಡಿದೆ. ಅವರ ಸಾಹಿತ್ಯ ಕೃಷಿ ಅಪೂರ್ವವಾದುದು.

## ಜಗದ್ಗುರು ಮಾತೆ ಮಹಾದೇವಿ

ಮಾತೆ ಮಹಾದೇವಿಯವರು ಒಬ್ಬ ಸನ್ಯಾಸಿನಿ, ವಿಚಾರವಾದಿ. ಮಹಿಳೆಯರ ಬಗ್ಗೆ ವಿಶೇಷ ಕಾಳಜಿಯುಳ್ಳವರು ಆಗಿದ್ದಾರೆ. ವೀರಶೈವ ಧರ್ಮದ ಬಗ್ಗೆ ಆಳವಾದ ಅಧ್ಯಯನವನ್ನು ಮಾಡಿದ್ದಾರೆ. ಜೊತೆಗೆ ಇವರು ಸಾಹಿತಿಯು ಹೌದು.

ಮಹಾದೇವಿಯವರು ಚಿನ್ಮೂಲಾದ್ರಿಯ ಚಿತ್ಕಳೆಯಾಗಿ ೧೯೪೬ ರಲ್ಲಿ ಜನಿಸಿದರು. ಇವರು ವಿಜ್ಞಾನ, ತತ್ವಶಾಸ್ತ್ರ ವಿಷಯಗಳ ಸ್ನಾತಕೋತ್ತರ ಪದವೀಧರೆ. ೧೯೬೬ ರಲ್ಲಿ ಪೂಜ್ಯ ಶ್ರೀಸದ್ಗುರು ಲಿಂಗಾನಂದ ಸ್ವಾಮಿಗಳಿಂದ ಜಂಗಮ ದೀಕ್ಷೆ ಪಡೆದು ಮಾತೆ ಮಹಾದೇವಿ ಎಂಬ ಅಭಿದಾನ ತಾಳಿದರು. ೧೯೭೦ ರಲ್ಲಿ ವಿಶ್ವವಿನೂತನ ಸ್ತ್ರೀ ಜಗದ್ಗುರು ಪೀಠವನ್ನು ಅಲಂಕರಿಸಿದರು. ಭಕ್ತಿ, ಜ್ಞಾನ, ವಿರಕ್ತಿಗಳ ದಿವ್ಯ ಸಂಗಮವಾಗಿ ಶೋಭಿಸುತ್ತಿರುವ ಇವರು ಕಿರಿಯ ವಯಸ್ಸಿನಲ್ಲಿಯೇ ಹಿರಿದಾದ ಜ್ಞಾನ ಗಳಿಸಿದರು. ಜಗದ ಜಾಗೃತಿಗಾಗಿ ಜ್ಞಾನ ಸುಧೆಯನ್ನು ಪ್ರವಚನಗಳ ಮೂಲಕ ಕೃತಿಗಳ ಮೂಲಕ ಜನತೆಗೆ ಧಾರೆಯೆರೆಯುತ್ತಿದ್ದಾರೆ.

ಮಾತೆ ಮಹಾದೇವಿಯವರ ಮೊದಲ ಕಾದಂಬರಿ "ಹೆಪ್ಪಿಟ್ಟಹಾಲು" ಇದು ರಾಜ್ಯ ಪ್ರಶಸ್ತಿ ವಿಜೇತ ಕೃತಿಯಾಗಿದೆ. ಅಕ್ಕ ಮಹಾದೇವಿಯವರನ್ನು ಕುರಿತಾದ "ತರಂಗಿಣಿ" ಅವರ ಎರಡನೆಯ ಕಾದಂಬರಿಯಾಗಿದೆ. ಅಕ್ಕನ ಮಹಾಜೀವನವನ್ನು ತನ್ನ ಕಾದಂಬರಿಯ ಕಥಾವಸ್ತುವಾಗಿರಿಸಿಕೊಂಡು ಒಂದು ಬೃಹತ್ ಗಾತ್ರದ ಸಾಹಿತ್ಯ ಕೃತಿಯನ್ನು ರಚಿಸಿದ್ದಾರೆ. ಇದಲ್ಲದೆ ಇನ್ನು ಅನೇಕ ಗ್ರಂಥವನ್ನು ರಚಿಸಿರುವುದನ್ನು ಕಾಣಬಹುದು. 'ಮಾತೃವಾಣಿ', 'ವಿರಹತರಂಗ', 'ಶಿವಯೋಗಿಣಿ', 'ಬಸವ ತತ್ವದರ್ಶನ', 'ಕಲ್ಯಾಣ ಕ್ರಾಂತಿ', 'ದೇವರ ಮಕ್ಕಳು', 'ಪತಿತೋದ್ಧಾರಕ', 'ಅನುಭವ ಮಂಟಪ', 'ಅಧ್ಯಾತ್ಮ ಮತ್ತು ಮಹಿಳೆ', 'ವಿಶ್ವವಿಭೂತಿ ಬಸವಣ್ಣ', ಇವೇ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ವೀರಶೈವ

ಧರ್ಮದ ಬಗ್ಗೆ ಅವರಿಗೆ ವಿಶೇಷ ಕಾಳಜಿ ಪ್ರೀತಿ ಇದೆ, ಇದನ್ನು ಅವರ ನಡೆ ನುಡಿ ಕೃತಿಗಳಲ್ಲಿ ಕಾಣಬಹುದು. ಈ ಧರ್ಮದ ಏಳಿಗೆಗಾಗಿ ಶ್ರಮಿಸುತ್ತಿದ್ದಾರೆ.

~*~**~*~*~*~

## ಅಧ್ಯಾಯ – ೩

# ಅಕ್ಕನ ಜೀವನ ಚರಿತ್ರೆ

ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ, ಬೆಳಗಿದ ಅಪೂರ್ವ ವ್ಯಕ್ತಿ ಅಕ್ಕ. ಅಕ್ಕನ ಜೀವನ ಚರಿತ್ರೆಯು ಅವಳ ಕಾವ್ಯದಂತೆ ಕಾಂತಿಯುಕ್ತವಾದುದು. ಸ್ವಾರಸ್ಯಕರವಾದುದು. ಮಹಾದೇವಿಯಕ್ಕ ಮಹದ್ವ್ಯಕ್ತಿ ಮಾತ್ರವಲ್ಲದೆ ಭಕ್ತಿ, ಜ್ಞಾನ, ವಿರಕ್ತಿ ಜನಿತ ಆತ್ಮಶಕ್ತಿ. ಮಹಿಳಾ ಸಮಾನತೆ ಆಂದೋಲನದ ಪ್ರಥಮ ನಿದರ್ಶನ. ಇಂತಹ ಮಹಾನ್ ಚೇತನಕ್ಕೆ ಶರಣ ಸಮುದಾಯದಲ್ಲಿ ವಿಶಿಷ್ಟ ಪೂರ್ಣವಾದ ಸ್ಥಾನವಿದೆ. ಅಕ್ಕನ ಹುಟ್ಟೂರಿನ ಬಗ್ಗೆ ಸಂದೇಹವಿಲ್ಲವಾದರೂ ಆಕೆಯ ತಂದೆ, ತಾಯಿಯ ಹೆಸರಿನ ಬಗ್ಗೆ, ವಿವಾಹದ ಬಗ್ಗೆ ಇಲ್ಲಿಯವರೆಗಿನ ಸಂಶೋಧನೆಗಳಿಂದ ಸಮಾಧಾನಕರವಾದ ಉತ್ತರಗಳು ದೊರೆಯುವುದಿಲ್ಲ. ಅಕ್ಕನನ್ನು ಕುರಿತು ಈ ತನಕ ಒಂದು ಶಾಸನವೂ ಸಿಕ್ಕಿಲ್ಲವಾದುದರಿಂದ ಕಾವ್ಯ, ಪುರಾಣ ಹಾಗೂ ಅಕ್ಕನ ವಚನಗಳಿಂದ ಆಕೆಯ ಜೀವನ ಚರಿತ್ರೆಯನ್ನು ರಚಿಸಬೇಕಾಗಿದೆ.

ಅಕ್ಕನನ್ನು ಕುರಿತು ಹರಿಹರನ 'ಮಹಾದೇವಿಯಕ್ಕನ ರಗಳೆ' ಯನ್ನು ರಾಚಕವಿಯ "ಮಹಾದೇವಿಯಕ್ಕನ ಸಾಂಗತ್ಯ", ಚೆನ್ನಬಸವಾಂಕ ಮಹಾದೇವಿಯಕ್ಕನ ಪುರಾಣವನ್ನು ಬರೆದಿದ್ದಾರೆ. ಇವು ಅಕ್ಕನನ್ನೇ ಕೇಂದ್ರವಸ್ತುವಾಗಿಟ್ಟುಕೊಂಡು ರಚನೆಯಾದ ಕೃತಿಗಳು, ಇವೇ ಅಲ್ಲದೆ ಚಾಮರಸ, ವಿರೂಪಾಕ್ಷ ಪಂಡಿತ, ಸಿದ್ದನಂಜೇಶ, ಶೂನ್ಯಸಂಪಾದನೆಕಾರರು ಮುಂತಾದ ಕವಿಗಳು ಅಕ್ಕನ ಜೀವನ ಚರಿತ್ರೆಯ ಕೆಲವು ಸಂಗತಿಗಳನ್ನು ಹೇಳುತ್ತಾರೆ. ಈ ಕವಿಗಳ ವಸ್ತು ಮತ್ತು ಸಂಗತಿಗಳನ್ನು ಆಧಾರವಾಗಿಟ್ಟುಕೊಂಡು ಅಕ್ಕನ ಜೀವನ ಚರಿತ್ರೆಯನ್ನು ಜನನದ ಹಿನ್ನೆಲೆ, ಹುಟ್ಟೂರು, ಕಿನ್ನರಿ ಬೊಮ್ಮಯ್ಯನ ಭೇಟಿ, ಕಲ್ಯಾಣದಲ್ಲಿ ಅಕ್ಕನ ಐಕ್ಯ ಹೀಗೆ ವಿಂಗಡಿಸಿ ವಿಶ್ಲೇಷಿಸಬಹುದು.

'ಅಕ್ಕನ ಜೀವನ ಚರಿತ್ರೆಯನ್ನು ಬರೆದವರಲ್ಲಿ ಹರಿಹರನೇ ಮೊಟ್ಟಮೊದಲಿಗ. ಹರಿಹರನ ಎಲ್ಲಾ ಶರಣರ ರಗಳೆಗಳು ಪ್ರಾರಂಭವಾಗುವುದು ದೇವಲೋಕದಿಂದ. ಮಹಾದೇವಿಯಕ್ಕನ ರಗಳೆಯು ದೇವಲೋಕದಿಂದ ಪ್ರಾರಂಭವಾಗುತ್ತದೆ. ಶಿವನ ಸಂದೇಶವನ್ನು ಪಾರ್ವತಿ ದೇವಿಗೆ ಹೊತ್ತು ತಂದ ಗುಪ್ತ ಗಣನಾಥನ ಕಾಲು ರುದ್ರಕನ್ಯೆಯೆಂಬ ಮಹಾದೇವಿಗೆ ತಗಲುತ್ತದೆ. ಆಗ ಅವಳು "ಭವಿ" ಎಂದು ನುಡಿದ್ದನ್ನು ಕೇಳಿ ಗಣನಾಥನು ಕಡು ನೊಂದು ಪಾರ್ವತಿಯ ಮುಖ ನೋಡುತ್ತಾನೆ. ಆಗ ಪಾರ್ವತಿ ಮಹಾದೇವಿಯನ್ನು ಕುರಿತು ನರಲೋಕದಲ್ಲಿ ಭಕ್ತರ ಮಗಳಾಗಿ ಹುಟ್ಟಿ, ಭವಿಯ

ಹೆಂಡತಿಯಾಗಿ, ಭಕ್ತರಿಗೆ ಶರಣೆಂದು ಸಂಸಾರಸಾಗರ ದಾಟಿ ಶ್ರೀಗಿರಿಯ ಮುಖಾಂತರ ದೇವಲೋಕಕ್ಕೆ ಬರಬೇಕೆಂದು ಪಾರ್ವತಿ ಶಾಪ ಕೊಡುತ್ತಾಳೆ. ಇತ್ತ ಭೂಲೋಕದಲ್ಲಿ ಬಹುದಿನಗಳಿಂದ ಮಕ್ಕಳಾಗದೆ ಇದ್ದ ಶಿವಭಕ್ತರು ಪಾರ್ವತಿಯನ್ನು ತಮಗೆ ಹೆಣ್ಣು ಮಗುವನ್ನು ಕರುಣಿಸು ಎಂದು ಪ್ರಾರ್ಥಿಸುತ್ತಾರೆ. ಗಿರಿಸುತೆಯ ಮುಡಿಯಿಂದ ಹೂ ಸಡಿಲವಾಗುತ್ತದೆ. ಅದನ್ನು ಶಿವಭಕ್ತೆ ತನ್ನುದರದಲ್ಲಿ ಇಟ್ಟುಕೊಳ್ಳುತ್ತಾಳೆ. ಕೆಲವು ದಿನಗಳ ನಂತರ ಒಂದು ಹೆಣ್ಣು ಮಗು ಜನಿಸುತ್ತದೆಂದು ಹರಿಹರ ಚಿತ್ರಿಸುತ್ತಾನೆ.

ಯಳಂದೂರು ಹರೀಶ್ವರನ ಪ್ರಭುದೇವರ ಪುರಾಣದಲ್ಲಿರುವ ಅಕ್ಕಮಹಾದೇವಿಯ ಜನನ ಹಿನ್ನೆಲೆ ಚಾಮರಸನ ಕೃತಿಯನ್ನು ಹೋಲುತ್ತದೆ. ಚನ್ನಬಸವಾಂಕ ಪರಮೇಶ್ವರನ ಹಣತೆಯಂತೆ ಪಾರ್ವತಿಯು ತನ್ನ ಸಾತ್ವಿಕ ಕಳೆಯನ್ನು ಭೂಲೋಕಕ್ಕೆ ಕಳುಹಿಸುತ್ತಾಳೆಂದು ಬರೆದಿದ್ದಾನೆ. ರಾಚಕವಿಯು ತನ್ನ ಕೃತಿಯಲ್ಲಿ ಅಕ್ಕನ ಹಿನ್ನೆಲೆಯನ್ನು ಹೀಗೆ ತಂದಿದ್ದಾನೆ. ಮಕ್ಕಳನ್ನು ಕೊಡು ದೇವರೇ ಎಂದು ಶಿವಭಕ್ತರು ಗಿರಿಯ ಚೆನ್ನಮಲ್ಲಿಕಾರ್ಜುನನ್ನು ಪ್ರಾರ್ಥಿಸಲು ಅವರ ಭಕ್ತಿಗೆ ಮೆಚ್ಚಿದ ಶಿವ-ಪಾರ್ವತಿಯ ಮಂದಾರ ಮಾಲೆಯನ್ನು ಕೊಡುತ್ತಾನೆ. ಆದ್ದರಿಂದಲೇ ಆಕೆ ಗರ್ಭಧರಿಸಿ ಹೆಣ್ಣು ಮಗುವಿಗೆ ಜನ್ಮ ಕೊಡುತ್ತಾಳೆ. ಆ ಶಿಶುವೇ ಮಹಾದೇವಿಯಕ್ಕ ಎಂದು ವಿವರಿಸಿದ್ದಾನೆ.

ಈ ಜನನದ ಹಿನ್ನೆಲೆಯನ್ನು ಕಾವ್ಯ ಪುರಾಣಗಳ ಹಿನ್ನೆಲೆಯಲ್ಲಿ ಗಮನಿಸಿದರೆ, ಹರಿಹರ ಹಾಗೂ ಶೂನ್ಯಸಂಪಾದನಕಾರರು ಮಹಾದೇವಿ ಪಾರ್ವತಿಯ ಶಾಪದಿಂದ ಭೂಲೋಕದಲ್ಲಿ ಹುಟ್ಟಿದವಳೆಂದು ಹೇಳಿದರೆ, ಚಾಮರಸ ವಿರೂಪಾಕ್ಷ ಪಂಡಿತ, ಯಳಂದೂರು ಹರೀಶ್ವರ, ಚೆನ್ನಬಸವಾಂಕ, ರಾಚಕವಿ ಮುಂತಾದವರು ಪಾರ್ವತಿಯ ಸಾತ್ವಿಕ ಕಳೆಯೇ ಮಹಾದೇವಿ ಎಂದು ಹೇಳುತ್ತಾರೆ.

**ಹುಟ್ಟೂರು**

ಅಕ್ಕನ ಹುಟ್ಟೂರಿನ ಬಗ್ಗೆ ಎಲ್ಲಾ ಪುರಾಣಕಾರರು, ಶೂನ್ಯ ಸಂಪಾದನಕಾರರಲ್ಲಿ ಕವಿಗಳಲ್ಲಿ ಒಮ್ಮತ ಅಭಿಪ್ರಾಯವಿದೆ. ಹರಿಹರ ಕವಿಯು ತನ್ನ ರಗಳೆಯ ತುಂಬೆಲ್ಲಾ ಅಕ್ಕಮಹಾದೇವಿಯನ್ನು 'ಉಡುತಡಿಯ ಮಹಾದೇವಿ' ಎಂದೇ ಸಂಬೋಧಿಸಿದ್ದಾನೆ. ಒಟ್ಟಾರೆಯಾಗಿ ಎಲ್ಲಾ ಕಾವ್ಯಗಳನ್ನು ಅವಲೋಕಿಸಿದರೆ 'ಉಡುತಡಿ' ಎಂಬುದು ಅಕ್ಕಮಹಾದೇವಿಯ ಹುಟ್ಟಿದ ಊರು ಎಂಬುದು ತಿಳಿಯುತ್ತದೆ. ಆದರೆ ಈ ಉಡುತಡಿ ಯಾವುದು ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕಲಬುರ್ಗಿ ಜಿಲ್ಲೆಯ 'ಮಹಾಗಾವ್'

ಎಂಬ ಗ್ರಾಮವೇ ಮೊದಲು ಉಡುತಡಿಯಾಗಿತ್ತೆಂದೂ, ಅದೇ ಅಕ್ಕನ ಜನ್ಮಸ್ಥಳವಾಗಿರಬಹುದೆಂದೂ ಒಂದು ಊಹೆ ಇದೆ. ಆದರೆ ಅಕ್ಕನಿಗೆ ಸಂಬಂಧಿಸಿದ ಯಾವ ಅವಶೇಷಗಳು ಅಲ್ಲಿ ದೊರೆಯುವುದಿಲ್ಲ. ಈಗ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಸಮೀಪದಲ್ಲಿರುವ 'ಉಡುತಡಿ'ಯೇ ಅಕ್ಕನ ಹುಟ್ಟೂರು ಎಂಬುದು ಬಹುಮಟ್ಟಿಗೆ ಅಂಗೀಕೃತ ಅಭಿಪ್ರಾಯ. ಅಕ್ಕ ವಿದ್ಯಾಭ್ಯಾಸ ಮಾಡಿದ ಮಠವನ್ನು ಈಗಲೂ ಗುರುವಾಡಿ ಮಠ ಎಂದು ಅಲ್ಲಿಯ ಜನ ಕರೆಯುತ್ತಾರೆ. ಕೌಶಿಕ ಅರಮನೆ ಎನ್ನಬಹುದಾದ ಅವಶೇಷ, ಕೋಟೆಯ ಅವಶೇಷಗಳು ಇದ್ದ ಕಾರಣ ಸಂಶೋಧಕರು ಅಕ್ಕನ ಹುಟ್ಟೂರು ಶಿವಮೊಗ್ಗ ಜಿಲ್ಲೆಯ 'ಉಡುತಡಿ' ಎಂದು ನಿರ್ಧರಿಸಿದ್ದಾರೆ. ಬಿಜ್ಜಳನ ಪ್ರತಿನಿಧಿಯಾಗಿ ಬಳ್ಳಿಗಾವೆ ಪ್ರದೇಶವನ್ನು ಆಳಿದ ಕಸಪಯ್ಯನಾಯಕನೇ ಕೌಶಿಕನಿರಬಹುದೆಂದು ಊಹಿಸಲಾಗಿದೆ. ಈತನ ಕುರಿತು ಶಾಸನಗಳು ಲಭ್ಯವಿದೆ. 'ಗುರುಲಿಂಗದೇವರು' ಅಕ್ಕ ಮಹಾದೇವಿಯ ದೀಕ್ಷಾಗುರುಗಳೆಂದು ಇಂದು ಎಲ್ಲರೂ ಒಪ್ಪಿಕೊಂಡಿರುವ ವಿಷಯ.

## ಯೌವ್ವನ

ಅಕ್ಕಮಹಾದೇವಿಗೆ ಬಾಲ್ಯ ಕಳೆದು ಯೌವ್ವನ ಕಾಲಿಟ್ಟಾಗ ಅವಳ ಜೀವನದಲ್ಲಿ ಮಹತ್ವಪೂರ್ಣವಾದ ಘಟನೆಯೊಂದು ಘಟಿಸಿತು. ಅದು ಕೌಶಿಕರಾಜ ಅಕ್ಕನನ್ನು ಬಯಸಿದ್ದು. ಅಕ್ಕ ಕೌಶಿಕನನ್ನು ಮದುವೆ ಆಗಿದ್ದಳೋ, ಇಲ್ಲವೋ ಎಂಬುದರ ಬಗ್ಗೆ ಪ್ರಾಚೀನ ಕವಿಗಳಲ್ಲಿ, ಆಧುನಿಕ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ.

ಹರಿಹರನ ಪ್ರಕಾರ ಕೌಶಿಕನೊಡನೆ ಮಹಾದೇವಿಯಕ್ಕನ ಮದುವೆ ಆಗಿತ್ತು. ಆ ಮದುವೆ ಮೂರು ಕರಾರುಗಳೊಂದಿಗೆ ಒಪ್ಪಿತವಾಗುವುದೆಂದು ಚಿತ್ರಿಸುತ್ತಾನೆ. ಅಕ್ಕ ಕೌಶಿಕನೊಂದಿಗೆ ಕೆಲವು ದಿನ ಸಂಸಾರ ಮಾಡಿದಂತೆಯೂ ಹರಿಹರ ಚಿತ್ರಿಸುತ್ತಾನೆ. ಈ ಮೂರು ಕರಾರುಗಳು ವಿಫಲವಾಗಿ ಅಕ್ಕ ವಿರಾಗಿಯಾಗಿ ಭವಿ ಸಂಗವನ್ನು ತೊರೆಯುವುದನ್ನು ಮುಂದಿನ ವಿವರಗಳಲ್ಲಿ ಗಮನಿಸಬಹುದು.

ಒಂದು ದಿನ ಅಕ್ಕ ಮೈಮರೆತು ಹಾಸಿಗೆಯಲ್ಲಿ ಒರಗಿರುತ್ತಾಳೆ. ಆಗ ದೂರದೇಶದಿಂದ ಕೆಲವು ಮಹೇಶ್ವರರು ಬಂದಿರುತ್ತಾರೆ. ಆ ಸಂದರ್ಭದಲ್ಲಿ ಕೌಶಿಕನು ಮಹಾದೇವಿಯ ಮೇಲಿನ ಅತಿಯಾದ ಪ್ರೀತಿಯಿಂದ ಅವಳನ್ನು ಎಚ್ಚರಿಸದೆ, ಅವರನ್ನು ಘರ್ಜಿಸಿ ಕಳುಹಿಸಿಬಿಡುತ್ತಾನೆ. ಇದೇ ಸಮಯಕ್ಕೆ ಅಕ್ಕನಿಗೆ ಎಚ್ಚರವಾಗಿ ಕೌಶಿಕನ ವರ್ತನೆಯನ್ನು ನಿಂದಿಸಿ, ತನ್ನ ಮೊದಲನೆಯ ಕರಾರು ಮುರಿದುದಾಗಿ ತಿಳಿಸುತ್ತಾಳೆ.

ಮತ್ತೊಂದು ದಿನ ಶಿವಪೂಜೆಯಲ್ಲಿ ತಲ್ಲೀನಳಾಗಿದ್ದಾಗ ಹಿಂದಿನಿಂದ ಬಂದ ಕೌಶಿಕ ಅಕ್ಕನನ್ನು ಅಪ್ಪುತ್ತಾನೆ. ಕೌಶಿಕನ ಈ ಕಾಮುಕತೆಯನ್ನು ನೋಡಿ ರೋಷದಿಂದ ಕೌಶಿಕನನ್ನು ನಿಂದಿಸಿ, ತನ್ನ ಎರಡನೇ ಕರಾರು ಮುರಿದುಕೊಳ್ಳುತ್ತಾಳೆ. ಇನ್ನೊಂದು ದಿನ ಕೌಶಿಕನೊಂದಿಗೆ ಕಾಮಾನುರಾಗದಲ್ಲಿದ್ದಾಗ ಅಕ್ಕನ ಆರಾಧ್ಯದೇವರು ಬರುತ್ತಾರೆ. ಅವರನ್ನು ಕಂಡ ಅಕ್ಕ ಭಾವಾವೇಶದಿಂದ ವಸ್ತ್ರಹೀನಳಾಗಿಯೇ ಓಡಿ ಬಂದು ಗುರುಗಳ ಪಾದಕ್ಕೆರಗುತ್ತಾಳೆ. ಗುರುಗಳು ಮಗಳೇ ಬಟ್ಟೆ ತೊಟ್ಟು ಬಾ ಎಂದುದರಿಂದ ಮಂಚದ ಮೇಲಿನ ಸೀರೆಗೆ ಕೈ ಹಾಕುತ್ತಾಳೆ. ಆಗ ಕೌಶಿಕನು ಕುಪಿತನಾಗಿ ಅವಳನ್ನು ಬಯ್ಯುತ್ತಾನೆ. ಇದನ್ನು ಕೇಳದ ಅಕ್ಕ ತನ್ನ ಮೂರನೇ ಕರಾರು ಮುರಿದುಕೊಂಡು ಭವಿಸಂಗ ತೊರೆದು ಕೇಶಾಂಬರಿಯಾಗಿಯೇ ಶ್ರೀ ಶೈಲಾಭಿಮುಖವಾಗಿ ಕೈಲಾಸ ಸೇರುತ್ತಾಳೆಂದು ಹರಿಹರ ಚಿತ್ರಿಸಿದ್ದಾನೆ.

ಚನ್ನಬಸವಾಂಕನು ತನ್ನ ಪುರಾಣ ಕೃತಿಯಲ್ಲಿ ಹರಿಹರನನ್ನು ಅನುಸರಿಸುತ್ತಾನೆ. ಆದರೂ ಕೆಲವು ಸೂಕ್ಷ್ಮ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಇದಲ್ಲದೆ ಚನ್ನಬಸವಾಂಕ ಹರಿಹರ ಕವಿ ಹೇಳಿದ ಮೂರು ಕರಾರುಗಳನ್ನು ಹೇಳುತ್ತಾನೆಯಾದರೂ ಆ ಕುರಿತು ಅರಸನಿಂದ ಲಿಖಿತ ಸಮ್ಮತಿಯನ್ನು ಪಡೆದು ರಾಜ್ಯದ ಸರ್ವ ಒಡೆತನವನ್ನು ತಾನೇ ವಹಿಸಿಕೊಳ್ಳುತ್ತಾನೆ. ರತಿಸುಖಕ್ಕೆ ಅವಕಾಶವಿರಲಿಲ್ಲವೆಂದು ಹೇಳುತ್ತಾನೆ.

ಒಟ್ಟಾರೆ ಈ ಕವಿಗಳು ಅಕ್ಕನ ಮದುವೆ ಆಗಿತ್ತು ಎಂದು ಹೇಳಿದರೆ ಇನ್ನು ಕೆಲವು ಕವಿಗಳು ಮದುವೆಯಾಗಿರಲಿಲ್ಲ ಎಂದು ಹೇಳುತ್ತಾರೆ. ಅವರಲ್ಲಿ ಚಾಮರಸ, ಯಳಂದೂರು ಹರೀಶ್ವರ, ಶೂನ್ಯಸಂಪಾದನಕಾರರು ಪ್ರಮುಖರು. ರಾಚಕವಿಯು ಚಾಮರಸ ಮತ್ತು ಯಳಂದೂರು ಹರೀಶ್ವರನನ್ನೇ ಅನುಸರಿಸುವನಾದರೂ ಕೆಲವು ಸ್ವಲ್ಪ ವ್ಯತ್ಯಾಸಮಾಡಿಕೊಂಡಿದ್ದಾರೆ. ಅಕ್ಕನ ಅಣತಿಯ ಮೇರೆಗೆ ಕೌಶಿಕ ಆಕೆಯ ಮನೆಗೆ ಬಂದು ತನ್ನನ್ನು ಮದುವೆ ಆಗುವಂತೆ ಪೀಡಿಸುತ್ತಾನೆ. ಹುಟ್ಟುವಾಗಲೇ ತಾನು ಶಿವನಿಗೆ ಅರ್ಪಿತಳಾಗಿದ್ದೇನೆ. ತನ್ನಲ್ಲೇಕಿಷ್ಟು ಮೋಹ ಎನ್ನುತ್ತಾಳೆ, ಅವಳ ತಾತ್ವಿಕ ವಿಚಾರಗಳಿಗೆ ಕಿವಿಗೊಡದ ಕೌಶಿಕ ಮತ್ತೆ ಮತ್ತೆ ಪೀಡಿಸುತ್ತಾನೆ. ಅಕ್ಕ ನಿರಾಕರಿಸಿದಾಗ ಕೌಶಿಕ ನಿನ್ನನ್ನು ಬಿಡುವುದಿಲ್ಲ ಎಂದು ಸೆರಗು ಹಿಡಿಯುತ್ತಾನೆ. ಮಹಾದೇವಿಯು ಸೀರೆ ತೆಗೆದೊಗೆದು ದಿಗಂಬರೆಯಾಗಿ ಹೋಗುತ್ತಾಳೆ. ಇಲ್ಲಿ ಮದುವೆಯಾದುದರ ಬಗ್ಗೆ ಅಥವಾ ಕೌಶಿಕನ ಅರಮನೆಗೆ ಹೋದುದರ ಬಗ್ಗೆ ಪ್ರಸ್ತಾಪವಿಲ್ಲ.

ಈ ಎಲ್ಲಾ ಕವಿಗಳ ಅಭಿಪ್ರಾಯವನ್ನು ಗಮನಿಸಿದರೆ, ಅಕ್ಕನ ಮದುವೆಯ ಕುರಿತು ಪ್ರಾಚೀನ ಕವಿಗಳಲ್ಲಿ ಭಿನ್ನಾಭಿಪ್ರಾಯಗಳು ಇವೆ. ಹಾಗೆಯೇ ಆಧುನಿಕ ವಿದ್ವಾಂಸರಲ್ಲಿಯೂ ಒಮ್ಮತವಾದ ಅಭಿಪ್ರಾಯಗಳಿಲ್ಲ. ಕೆಲವರು ಹರಿಹರನ ಅಭಿಪ್ರಾಯಗಳನ್ನು ಅನುಮೋದಿಸಿದರೆ, ಇನ್ನು ಕೆಲವರು ಚಾಮರಸನ ಅಭಿಪ್ರಾಯಗಳನ್ನೇ ಅನುಮೋದಿಸಿ, ಅಕ್ಕನ ಮದುವೆ ಆಗಿರಲಿಲ್ಲ ಎಂದು ಹೇಳುತ್ತಾರೆ. ಆದರೆ ಪ್ರಾಚೀನ ಎಲ್ಲಾ ಕವಿಗಳಲ್ಲಿ ಅಕ್ಕನ ದಿಗಂಬರತೆಯ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳಿಲ್ಲ.

## ಕಿನ್ನರಿ ಬೊಮ್ಮಯ್ಯನ ಭೇಟಿ

ಅಕ್ಕನ ಜೀವನದಲ್ಲಿ ನಡೆದ ಮತ್ತೊಂದು ಮಹತ್ವಪೂರ್ಣವಾದ ಘಟನೆ ಕಿನ್ನರಿ ಬೊಮ್ಮಯ್ಯನ ಭೇಟಿ. ಅಕ್ಕ ಶ್ರೀಶೈಲದಲ್ಲಿ ಕಿನ್ನರಿ ಬೊಮ್ಮಯ್ಯನನ್ನು ಕಂಡುದಾಗಿ ಹರಿಹರ ಕವಿ ಹೇಳುತ್ತಾನೆ. ಆದರೆ ಶಿವಗಣಪ್ರಸಾದಿ ಮಹಾದೇವಯ್ಯರ ಶೂನ್ಯಸಂಪಾದನೆಯಲ್ಲಿ ಶ್ರೀ ಶೈಲದ ಮಾರ್ಗಮಧ್ಯದಲ್ಲಿ ಅಕ್ಕನನ್ನು ಕಂಡ ಕಿನ್ನರಿ ಬೊಮ್ಮಯ್ಯ ಹರುಷಿಸಿ ನೋಡುವನು. ಆಗ ಅಕ್ಕ ತನ್ನೀ ಅಂತರಂಗ' ಜ್ಞಾನದ ಅಗ್ನಿಯಲ್ಲಿ ಕಾಮವನ್ನು ಸುಟ್ಟು ಭಸ್ಮ ಮಾಡಿ ತೋರಿದ ಅವನನ್ನು ಬೀಳ್ಕೊಂಡು, ಕಲ್ಯಾಣಕ್ಕೆ ಬರುತ್ತಾಳೆಂದು ಚಿತ್ರಣಗೊಂಡಿದೆ. ಇದು ಚೆನ್ನ ಬಸವಾಂಕನ ಮಹಾದೇವಿಯಕ್ಕನ ಪುರಾಣ ಮತ್ತು ಕೆಂಚವೀರಣ್ಣೊಡೆಯನ ಶೂನ್ಯ ಸಂಪಾದನೆಯಲ್ಲಿ ಈ ವಿಷಯ ಪ್ರಸ್ತಾಪವಾಗಿದೆ. ಆದರೆ ಆಧುನಿಕ ವಿದ್ವಾಂಸರಲ್ಲಿ ಈ ವಿಷಯ ಕುರಿತು ಚರ್ಚೆಗಳಿವೆ. ಒಮ್ಮತ ಅಭಿಪ್ರಾಯಗಳು ಮೂಡಿ ಬಂದಿಲ್ಲ.

## ಕಲ್ಯಾಣದಲ್ಲಿ ಅಕ್ಕ

ಅಕ್ಕ ಕಲ್ಯಾಣಕ್ಕೆ ಹೋದ ವಿಷಯವನ್ನು ಹರಿಹರ ಹೇಳುವುದಿಲ್ಲ. ಚಾಮರಸನ ಪ್ರಕಾರ ಅಕ್ಕ ಕಲ್ಯಾಣಕ್ಕೆ ಹೋದರೂ ಪ್ರಭುದೇವ ಮತ್ತು ಅಕ್ಕಮಹಾದೇವಿಯರ ಮಧ್ಯೆ ನಡೆದ ಪ್ರಶ್ನೋತ್ತರ ವಿಷಯ ಹೇಳದೆ ಅಲ್ಲಮನು ಅಕ್ಕನಿಗೆ ಐಕ್ಯವನ್ನು ಉಪದೇಶಿಸಿ, ಶ್ರೀಗಿರಿಗೆ ಹೋಗೆಂದು ಹೇಳುವುದನ್ನು ಮಾತ್ರ ಪ್ರಸ್ತಾಪಿಸುತ್ತಾನೆ. ಈ ವಿಷಯದಲ್ಲಿ ಮೊದಲೆರಡು ಶೂನ್ಯಸಂಪಾದನೆಗಳು ಚಾಮರಸನನ್ನೇ ಅನುಸರಿಸಿವೆ. ನಾಲ್ಕನೆಯದರಲ್ಲಿ ಮಾತ್ರ ಅಕ್ಕ ಮಹಾದೇವಿ ಮತ್ತು ಅಲ್ಲಮಪ್ರಭುಗಳ ಮಧ್ಯೆ ಪ್ರಶ್ನೋತ್ತರ ನಡೆದ ವಿಷಯದ ಬಗ್ಗೆ ಪ್ರಸ್ತಾಪ ಬರುತ್ತದೆ. ಅಕ್ಕನು ಕೆಲವು ಕಾಲ ಕಲ್ಯಾಣದಲ್ಲಿ ಶರಣರ ಪರಿಸರದಲ್ಲಿ ಇದ್ದಳೆಂಬುದರ ಬಗೆಗೆ ಸಂದೇಹವಿಲ್ಲ. ಇದಕ್ಕೆ ನಿದರ್ಶನವಾಗಿ ಆಕೆಯ ವಚನಗಳಿವೆ.

ಅಕ್ಕನು ಉಡುತಡಿಯಿಂದ ಶ್ರೀಗಿರಿಗೆ ಬಂದಾಗ ಪುನಃ ಅವಳ ತಂದೆ - ತಾಯಿಗಳು ಮಗಳನ್ನು ಕಂಡಂತೆಯು ಮತ್ತು ಅವರಿಗೆ ಸಮಾಧಾನ ಹೇಳಿ ಹಿಂದಿರುಗಿಸಿದಂತೆಯೂ, ಕೌಶಿಕ ಕಪಟ ವೇಷಧಾರಿಯಾಗಿ ಬಂದು ಅಕ್ಕಮಹಾದೇವಿಗೆ ಕರುಣಿಸು ಎಂದು ಬೇಡಿಕೊಂಡಂತೆಯೂ ಅವನಿಗೆ ಬೈದು ಹಿಂದಿರುಗಿಸಿದಂತೆಯೂ ಹರಿಹರ ತನ್ನ ರಗಳೆಯಲ್ಲಿ ಚಿತ್ರಿಸಿದ್ದಾನೆ.

### ಐಕ್ಯ

ಅಕ್ಕ ಮಹಾದೇವಿ ಕಲ್ಯಾಣದ ಅನುಭವ ಮಂಟಪದ ಗೋಷ್ಠಿಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತ ಕೆಲವು ವರುಷಗಳವರೆಗೆ ಇದ್ದು, ಶರಣರನ್ನು ಬೀಳ್ಕೊಂಡು, ಶ್ರೀಶೈಲಕ್ಕೆ ಹೋಗಿ ಲಿಂಗೈಕ್ಯಳಾಗುತ್ತಾಳೆ ಎಂಬ ವಿವರಣೆ ಗೋಳೂರು ಸಿದ್ದವೀರಣ್ಣೊಡೆಯರ ಶೂನ್ಯ ಸಂಪಾದನೆಯಲ್ಲಿ ಬರುತ್ತದೆ. ಅಕ್ಕನ ಜೀವನದ ಕೆಲವು ಸಂಗತಿಗಳ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, ಆಕೆ ತನ್ನ ಕೊನೆಯ ದಿನಗಳನ್ನು ಶ್ರೀಶೈಲದಲ್ಲಿ ಕಳೆದಳೆಂಬುದರಲ್ಲಿ ಒಮ್ಮತವಿದೆ. ಕಲ್ಯಾಣದಲ್ಲಿ ಆ ದಿನಗಳಲ್ಲಾದ ಗಲಭೆಯಿಂದ ಕೆಲವು ಶರಣರು ಕಲ್ಯಾಣವನ್ನು ಬಿಟ್ಟುಹೋಗುವಂತೆ ಆಗಿದ್ದು, ಅಕ್ಕನೂ ಆ ಸಂದರ್ಭದಲ್ಲಿಯೇ ಶ್ರೀಶೈಲದತ್ತ ಸಾಗಿರಬೇಕು.

ಹೀಗೆ ಪ್ರಾಚೀನ ಕಾಲದ ಕವಿಗಳಿಂದ ಅಕ್ಕಮಹಾದೇವಿಯ ಜೀವನ ಒಂದಲ್ಲಾ ಒಂದು ಬದಲಾವಣೆಯೊಂದಿಗೆ ಚಿತ್ರಿತವಾಗಿ ಬಂದಿರುವುದನ್ನು ಈ ಮೇಲಿನ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಆಧುನಿಕ ವಿದ್ವಾಂಸರಲ್ಲಿಯೂ ಕೂಡ ಈ ಚೇತನದ ಜೀವನ ಯಾತ್ರೆಯ ಬಗ್ಗೆ ಒಮ್ಮತ ಅಭಿಪ್ರಾಯವಿಲ್ಲ.

~*~*~*~*~

## ಅಧ್ಯಾಯ ೪

# ವಚನಗಳಲ್ಲಿ ಅಕ್ಕ

ಯಾವುದೋ ಒಂದು ದೇಶದಲ್ಲಿ ಯಾವುದೋ ಒಂದು ಕಾಲಕ್ಕೆ ಯಾರೋ ಒಬ್ಬ ಮಹಾನ್ ವ್ಯಕ್ತಿ ಆವಿರ್ಭವಿಸುವುದು ಸಹಜ. ಆದರೆ ಇಂತಹ ಹಲವಾರು ವ್ಯಕ್ತಿಗಳು ಏಕ ಕಾಲದಲ್ಲಿ ಒಟ್ಟಿಗೇ ಆವಿರ್ಭವಿಸುವುದು ೧೨ ನೇ ಶತಮಾನದ ವಿಶೇಷ. ಇಂತಹ ಮಹಾನ್ ಚೇತನಗಳ ತಾಣ ಕನ್ನಡನಾಡು ಎಂಬುದು ಹೆಮ್ಮೆಯ ವಿಷಯ. ಬಸವ, ಅಲ್ಲಮ, ಜೇಡರದಾಸಿಮಯ್ಯ, ಸಿದ್ದರಾಮ, ಮುಕ್ತಾಯಕ್ಕ ಮುಂತಾದವರು ಈ ಯುಗದ ಶ್ರೇಷ್ಠ ಮಹನೀಯರು. ಈ ವ್ಯಕ್ತಿಗಳ ಸಾಲಿಗೆ ಸೇರುವ ಅನರ್ಘ್ಯ ಸ್ತ್ರೀರತ್ನ ಅಕ್ಕಮಹಾದೇವಿ, ವ್ಯಕ್ತಿ ವೈಶಿಷ್ಟ್ಯದಿಂದ ವಚನಗಳ ದೃಷ್ಟಿಯಿಂದ, ಅಧ್ಯಾತ್ಮ ಶಿರೋಮಣಿಯಾದ ಅಕ್ಕ ಜನಮಾನಸರಲ್ಲಿ ಮೊದಲ ಪಂಕ್ತಿಯಲ್ಲಿ ನಿಲ್ಲುತ್ತಾಳೆ. ಇಂತಹ ಮಹಾನ್ ಚೇತನಗಳು ತಮ್ಮ ಜೀವನದ ಬಗ್ಗೆ ವೈಯಕ್ತಿಕ ವಿಷಯಗಳನ್ನು ಕುರಿತು ಎಲ್ಲಿಯೂ ಹೇಳಿಕೊಂಡಿಲ್ಲ. ಈ ಕಾರಣದಿಂದ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸುವಲ್ಲಿ ತೊಡಕಾಗಿದೆ. ಅಕ್ಕ ಐತಿಹಾಸಿಕ ವ್ಯಕ್ತಿಯೆಂಬುದು ಸತ್ಯ. ೧೨ ನೇ ಶತಮಾನದಲ್ಲಿ ಜೀವಿಸಿದ್ದಳೆಂಬುದು ಸತ್ಯ. ಆದರೆ ಅವಳ ಬಗ್ಗೆ ನಮಗೆ ಲಭ್ಯವಿರುವ ಮಾಹಿತಿಯೆಂದರೆ ಅವಳ ವಚನಗಳು ಮತ್ತು ಇವಳನ್ನು ಆಕರವಾಗಿಟ್ಟುಕೊಂಡು ರಚಿಸಿದ ಪುರಾಣ ಸಾಹಿತ್ಯಕೃತಿಗಳು. ಈ ಸಾಹಿತ್ಯ ಕೃತಿಗಳಾದ ಅಕ್ಕನ ಜೀವನ ಚರಿತ್ರೆಯನ್ನು ಕಟ್ಟಬಹುದಾದರೂ ಇವು ಕೆಲವೊಮ್ಮೆ ಅತಿಮಾನುಷ ಕಲ್ಪನೆಯಲ್ಲಿ ಅಕ್ಕನನ್ನು ಸೃಷ್ಟಿಸಿದೆ. ಇದರಿಂದ ಅಕ್ಕನ ವ್ಯಕ್ತಿತ್ವವನ್ನು, ಬದುಕನ್ನು ಕಟ್ಟಿಕೊಡುವುದರಲ್ಲಿ ಇವು ಸೋಲುತ್ತದೆ. ಅವಳ ನೈಜ ಬದುಕಿನ ಚಿತ್ರಣ ಇದರಿಂದ ದುರ್ಲಭ, ಈ ಎಲ್ಲಾ ಕಾರಣದಿಂದಾಗಿ ಸದ್ಯಕ್ಕೆ ವಚನಗಳೇ ಅವಳ ಜೀವನದ ಪ್ರಮುಖ ಆಧಾರಗಳಾಗಿವೆ. ಅವಳ ಜೀವನ ಚರಿತ್ರೆಯನ್ನು ಕಟ್ಟಿಕೊಡುವ ಒಂದು ಕಿರುಪ್ರಯತ್ನ ಇಲ್ಲಿದೆ.

ಅಕ್ಕನ ಜನನ, ಬಾಲ್ಯ ತಂದೆ ತಾಯಿಗಳ ಬಗ್ಗೆ ಯಾವುದೇ ಮಾಹಿತಿಗಳು ಅವಳ ವಚನಗಳಿಂದ ತಿಳಿದು ಬರುವುದಿಲ್ಲ. ನಮಗೆ ಲ್ಭ್ಯವಿರುವ ಆಧಾರಗಳಿಂದ ಆಕೆ ಶಿವಭಕ್ತರ ಮಗಳು ಉಡುತಡಿ ಗ್ರಾಮದಲ್ಲಿ ೧೧೬೦ ರಲ್ಲಿ ಜನಿಸಿದಳು ಎಂಬುದು. ಈಕೆ ಅಸಾಮಾನ್ಯ ರೂಪವತಿಯಾಗಿದ್ದಳು, ಇವಳನ್ನು ಕೌಶಿಕ ಮೋಹಿಸಿದ ಎಂಬ ವಿಷಯ ಇತಿಹಾಸದಿಂದ ತಿಳಿದು ಬರುತ್ತದೆ. "ಹಸೆಯ ಮೇಲಣ ಮಾತುಬೆಸಗೊಳಲಟ್ಟಿದರೆ ಶಶಿಧರನ ಹತ್ತಂಗೆ

ಕಳುಹಿಸಿದರೆಮ್ಮವರು" ಎನ್ನುವ ಆಕೆಯ ವಚನ ಆಕೆಯನ್ನು ಪರಶಿವನಿಗೆ ಕೊಟ್ಟುವಿವಾಹ ಮಾಡಿದರು ಎಂಬ ಧಾಟಿಯಲ್ಲಿ ಬರುತ್ತದೆ.

ಇವಳನ್ನು ಬಯಸಿದ ಕೌಶಿಕರಾಜ ಬಹುಶಃ ಬಿಜ್ಜಳನ ಪ್ರತಿನಿಧಿಯಾದ ಕಸಪಯ್ಯನಾಯಕ. ಸುಂದರ ಈತ. ಹಾಗೆಯೇ ಇತಿಹಾಸದಲ್ಲಿ ಒಳ್ಳೆಯ ಹೆಸರು ಈತನಿಗೆ ಇಲ್ಲ ದುಷ್ಟಮಂತ್ರಿಯಾಗಿ ಅನಪೇಕ್ಷಿತ ಕಾರ್ಯಗಳನ್ನು ಮಾಡಿದ ದಾಖಲೆಗಳಿವೆ. ಇಂತಹ ರಾಜನನ್ನು ಅಕ್ಕ ಮದುವೆಯಾಗಿದ್ದಳೇ ಇಲ್ಲವೇ ಎನ್ನುವುದು ಭಿನ್ನಾಭಿಪ್ರಾಯಗಳಿಂದ ಕೂಡಿದೆ. ಈ ಇಬ್ಬರ ನಡುವೆ ದೈಹಿಕ ಸಂಬಂಧ ಇತ್ತೇ? ಎನ್ನುವುದು ಪ್ರಶ್ನೆಗಳಾಗಿಯೇ ಉಳಿದಿದೆ. ಅಕ್ಕ ಕೌಶಿಕನ ಅರಮನೆಗೆ ಹೋಗಿದ್ದಾಳೆಂದು ಅವಳ ವಚನಗಳಿಂದಲೇ ತಿಳಿದುಬರುತ್ತದೆ. ಅವನನ್ನು ಪರಿವರ್ತಿಸುವ ದೃಷ್ಟಿಯಿಂದ ಹೋಗಿರಬಹುದು. ಇದು ಅವಳ ವ್ಯಕ್ತಿತ್ವಕ್ಕೆ ಅಪಚಾರ ಎನ್ನುವ ದೃಷ್ಟಿಯಿಂದ ನಮ್ಮ ವಿದ್ವಾಂಸರು ಅವಳಿಗೆ ಮದುವೆಯಾಗಿತ್ತೆಂದು ಸಾಧಿಸಿರಲೂಬಹುದು. ಅಕ್ಕನಿಗೆ ಮದುವೆಯಾಗಿದ್ದರೂ, ಆಗದಿದ್ದರೂ ಅವಳ ವೈರಾಗ್ಯ, ವಿರಕ್ತಿಗೆ ಯಾವುದೇ ಕುಂದು ಬರುವುದಿಲ್ಲ.

ಅಕ್ಕ ಚೆನ್ನಮಲ್ಲಿಕಾರ್ಜುನನನ್ನು ತನ್ನ ಗಂಡನೆಂದು ಭಾವಿಸಿದ್ದಳು. ಒಂದು ಸಮಾಜದ ವ್ಯವಸ್ಥೆಗೆ ವಿರುದ್ಧವಾದ ಕ್ರಾಂತಿಕಾರಿ ನಿಲುವನ್ನು ತೋರಿದಳು. ಆತನನ್ನು ಬಿಟ್ಟ ಅನ್ಯರು ನನಗೆ ಸಮನಲ್ಲ ಎಂದು ದಿಟ್ಟತನದ ಉತ್ತರವನ್ನು ಪುರುಷ ಸಮಾಜಕ್ಕೆ ನೀಡಿದಳು. ಅಂತಹ ಒಂದು ವಚನ.

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗಾನೊಲಿದೆನವ್ವಾ
ಎಡೆ ಇಲ್ಲದ ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ
ಭವ ವಿಲ್ಲದ, ಭಯವಿಲ್ಲದ ಚೆಲುವಂಗೆ ನಾನೊಲಿದೆ ನಾನು
... ಇದು ಕಾರಣ ಚನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ"

ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ಎಂದು ನಿರ್ದಾಕ್ಷಿಣ್ಯವಾಗಿ, ಕಟುವಾಗಿ ನಿಸ್ಸಂಕೋಚವಾಗಿ ತನ್ನ ಜೀವನ ಕಥೆಯ ಮುಖ್ಯವಾದ ಒಂದು ಪುಟವನ್ನೇ ಈ ವಚನದಲ್ಲಿ ತೆರೆದಿರುವುದಲ್ಲದೆ, ಭಗವಂತನ ಸ್ವರೂಪವನ್ನು ಅನನ್ಯ ರೀತಿಯಲ್ಲಿ ಸಂಗ್ರಹಿಸಿದ್ದಾಳೆ. ಸಾವಿಲ್ಲದ್ದು, ಕೇಡಿಲ್ಲದ್ದು ಚೆಲುವಾಗಲೇಬೇಕು, ಶಿವನಿದ್ದ ಕಡೆ ಸೌಂದರ್ಯವಿರಲೇಬೇಕು, ಅಂತಹ ಚೆಲುವನನ್ನು ಪತಿಯಾಗಿ ಪಡೆದು ಅಕ್ಕ ಧನ್ಯಳಾದರೆ, ಅವಳನ್ನು ಮಗಳಾಗಿ ಪಡೆದ ಈ ಕನ್ನಡನಾಡು ನುಡಿ ಧರ್ಮ ಧನ್ಯವಾಗಿದೆ.

ಚೆನ್ನಮಲ್ಲಿಕಾರ್ಜುನನ್ನೇ ಪತಿಯೆಂದು ಭಾವಿಸಿದ್ದ ಅಕ್ಕನಿಗೆ ಕೌಶಿಕನ ಅರಮನೆಗೆ ಹೋಗಬೇಕಾಗಿ ಬಂದುದು ಬದುಕಿನ ದುರ್ವಿಧಿ, ತನ್ನ ಬದುಕಿನ ನಿರ್ಧಾರವನ್ನು ತಾನೇ ತೆಗೆದುಕೊಂಡು ಅರಮನೆಗೆ ಹೋಗುತ್ತಾಳೆ. ತನ್ನ ಹಂಚಿಕೆ ತನ್ನನ್ನೇ ಸುತ್ತಿ ಕೆಡಹಿದಂತೆ ಕೌಶಿಕನ ಬಲೆಗೆ ಅಕ್ಕ ಬಿದ್ದಳು, ಅದಕ್ಕಾಗಿ ಪರಿತಪಿಸುವ ಒಂದು ವಚನದ ಪರಿ ಹೀಗಿದೆ.

"ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ
ತನ್ನ ನೂಲು ತನ್ನನ್ನೇ ಸುತ್ತಿ ಸುತ್ತಿ ಸಾವ ತೆರನಂತೆ
ಮನ ಬಂದುದ ಬಯಸಿ ಬಯಸಿ ಬೇವುತಿರುವೆನಯ್ಯ
ಅಯ್ಯ ಎನ್ನ ಮನದ ದುರಾಸೆಯ ಮಾಣಿಸಿ
ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ॥"

ಎಂದು ಒಳಗೊಳಗೆ ಶಿವನಲ್ಲಿ ಮೊರೆಯಿಡುತ್ತಾ ಅಕ್ಕ ಸಂಸಾರದಲ್ಲಿ ಕಾಲಿಟ್ಟಳು ಇದು ಅವಳ ಜೀವನದ ಎರಡನೇ ಘಟ್ಟವಾಗಿದೆ. ಮಾಯ ಸಂಸಾರದಲ್ಲಿ ಸಿಲುಕಿದ ತನ್ನನ್ನು ಕಾಯುವಂತೆ ಮಲ್ಲಿಕಾರ್ಜುನನನ್ನು ಪರಿಪರಿಯಾಗಿ ಬೇಡುತ್ತಿದ್ದಾಳೆ. ಅವಳು ಸಂಸಾರದಲ್ಲಿ ಕಂಡದ್ದು ಕೇವಲ ಮಾಯದ ಮದ, ಕಾಯದ ಕತ್ತಲೆ, ಜೀವದ ಜಂಜಡ ಮನಸ್ಸು ಯಾವಾಗಲು ಉದರಕ್ಕೆ ಹರಿದು ಹೊನ್ನು, ಹೆಣ್ಣು ಮಣ್ಣುಗಳು ತನ್ನವೆಂದು ಭ್ರಮೆಯನ್ನು ಉಂಟುಮಾಡಿತು. ಆಗ ದಿಕ್ಕು ತಪ್ಪಿದವಳಂತೆ ಪರಿತಪಿಸುತ್ತಾಳೆ

"ಬೆಂದ ಒಡಲ ಹೊರೆವುದಕ್ಕೆ ನಾನಾರೆ
ಚೆನ್ನಮಲ್ಲಿಕಾರ್ಜುನಯ್ಯ
ಕೊಲ್ಲು ಕಾಯಿ ನಿಮ್ಮ ಧರ್ಮ",

ಎಂದು ದುಃಖಿಸಿದಳು. ಹಾಗೆಯೇ ಇನ್ನೊಂದು ವಚನದಲ್ಲಿ

"ಕಲ್ಲ ಹೊಕ್ಕರೆ ಕಲ್ಲ (ಬಿರಿಸಿದೆ)
ಗಿರಿಯ ಹೊಕ್ಕರೆ ಗಿರಿಯ (ಬಿರಿಸಿದೆ)
ಭಾಪು ಸಂಸಾರವೇ ಬೆನ್ನಿಂದ ಬೆನ್ನಿ ಹತ್ತಿ ಬಂದೆ
ಚನ್ನಮಲ್ಲಿಕಾರ್ಜುನಯ್ಯ ಇನ್ನೇನನ್ನೀವೆ?"

ಈ ಸಂಸಾರ ಬೆಂಬಿಡದೆ ನನ್ನನ್ನು ಕಾಡುತ್ತಿದೆ. ಚನ್ನಮಲ್ಲಿಕಾರ್ಜುನ ತನ್ನನ್ನು ಕಾಯಬೇಕೆಂದು ಬೇಡುತ್ತಿದ್ದಾಳೆ. ಅದು ಕಣ್ಣೀರಾಗಿ ಹರಿಯಿತು. ಮನದ ಮಾತಾಗಿ ಮೂಡಿ

ಪರದೈವದಲ್ಲಿ ಬೇಡಿಕೆಯಾಯಿತು. ಇದರಿಂದ ಅವಳ ಹೃದಯ ಹಗುರಾಗಿರಬೇಕು. ಶಾಂತಿ ಸೈರಣೆ ಸಮಾಧಾನ ಬಂದಿರಬೇಕು. ಅವಳ ಸಹನೆ ಕೌಶಿಕನಿಗೆ ಬೇರೆಯೇ ಅರ್ಥವನ್ನು ನೀಡಿತು. ಕೌಶಿಕನಿಗೆ ಅಕ್ಕನ ಅಧ್ಯಾತ್ಮ ರೀತಿ ಸರಿಬೀಳಲಿಲ್ಲ. ಹಾಗೆಂದು ಬಲಾತ್ಕಾರ ಮಾಡುವ ಅರಸಿಕನೂ ಅಲ್ಲ. ಅರಮನೆಯ ಸಖಿಯರು ಅಕ್ಕನ ಸುತ್ತ ನೆರೆದು ಕೌಶಿಕನ ಗುಣಗಾನ ಮಾಡಿದರು. ಆದರೆ ಅಕ್ಕ ಕೌಶಿಕನನ್ನು ತಿರಸ್ಕರಿಸಿ ಚೆನ್ನಮಲ್ಲಿಕಾರ್ಜುನನ ಮೇಲೆ ತನಗಿದ್ದ ಅವಿರಳ ಪ್ರೇಮವನ್ನು ಕುರಿತು ಹೀಗೆ ಹೇಳುತ್ತಾಳೆ.

“ಗಿರಿಯಲ್ಲದೆ ಹುಲು ಮೊರಡಿಯಲ್ಲಾಡುವುದೇ ನವಿಲು.
ಕೊಳನಲ್ಲದೆ ಕಿರುವಳ್ಳಕ್ಕೆಳುಸುವುದೇ ಹಂಸೆ?
ಮಾಮರ ಕುಳಿತಲ್ಲದೆ ಸ್ವರಗೈವುದೇ ಕೋಗಿಲೆ?
ಪರಿಮಳವಿಲ್ಲದ ಪುಷ್ಪಕ್ಕೆಳುಸುವುದೇ ಭ್ರಮರ?
ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ, ಅನ್ಯಕ್ಕೆಳಿಸುವುದೇ
ಎನ್ನ ಮನ ಕೇಳಿರೆ ಕೆಳದಿಯರಿರಾ?”

ಎಂದು ತನ್ನ ಪ್ರೇಮ ಸಿದ್ದಿಸದೇ ಹೋದುದಕ್ಕಾಗಿ ಉದಾಸೀನ ಭಾವದಿಂದ

“ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುರಿದ ನರಿಸಿನವೆನಗೆ
ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ ಆನು ಚೆನ್ನಮಲ್ಲಿಕಾರ್ಜುನರಿಗೆ
ಮದುವಳಿಗೆ ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ?”

ಎಂದೂ ತನ್ನ ಸಖಿಯರಿಗೆ ಹೇಳುತ್ತಾಳೆ. ಯಾವ ಅಲಂಕಾರಗಳು ಅವಳಿಗೆ ಬೇಕಿಲ್ಲ. ಸಂಸಾರ ಅಕ್ಕನ ಪಾಲಿಗೆ ಬಿಟ್ಟನೆಂದರೂ ಬಿಡದ ಮಾಯೆಯಾಗಿದೆ ಆದರೆ, ಚೆನ್ನಮಲ್ಲಿಕಾರ್ಜುನ ಒಲಿದ ಶರಣಂಗೆ ಮಾಯೆ ಇಲ್ಲ. ಮರಹಿಲ್ಲ, ಅಭಿಮಾನವು ಇಲ್ಲವಾದ್ದರಿಂದ ಎನ್ನ ಸುತ್ತಿದ ಪ್ರಪಂಚವ ಬಿಡಿಸಯ್ಯ. ಎಂದು ನಿರಂತರವೂ ಶಿವನಲ್ಲಿಯೇ ಅನನ್ಯಭಕ್ತಿಯಿಂದ ಮೊರೆಯಿಡುವುದೊಂದೇ ತನ್ನ ಕರ್ತವ್ಯವೆಂದು ಅರಿತು ಎಷ್ಟೋ ಅಡ್ಡಿ ಆತಂಕಗಳ ನಡುವೆಯೂ ಶಿವಾನುಭವ, ಶಿವಪೂಜೆ ಗುರುಪೂಜೆಗಳಲ್ಲಿ ನಿರತಳಾದಳು. ಜಂಗಮರ ಪಡೆಯನ್ನು ಸತ್ಕರಿಸಲು ಟೊಂಕಕಟ್ಟಿ ನಿಂತಳು. ಚೆನ್ನನ ಪೂಜೆಗೆ ಪ್ರತಿನಿತ್ಯವೂ ಸಂಭ್ರಮದ ಸಿದ್ಧತೆಯಾಗುತ್ತಿತ್ತು. ಇದೆಲ್ಲವನ್ನು ನೋಡಿದ ಕೌಶಿಕನಿಗೆ ಸಿಟ್ಟಾಗಿರಬಹುದು. ಆತ ಜೈನನಾಗಿದ್ದು, ಈ ರೀತಿಯಾಗಿ ಅಕ್ಕ ಜಂಗಮರ ಸೇವೆಯನ್ನು ಮಾಡುತ್ತಿದ್ದನ್ನು ಸಹಿಸದಾಗಿದ್ದಾನೆ. ಆ ಕಾರಣದಿಂದಾಗಿ ಇಬ್ಬರಲ್ಲೂ ಭಿನ್ನಾಭಿಪ್ರಾಯಗಳು

ಉಂಟಾಗಿರಬಹುದು. ಇದು ಜಗಳಕ್ಕೆ ತಿರುಗಿ ಅಕ್ಕನ ಸೆರಗಿಗೆ ಕೈಹಾಕಿರಬಹುದು. ಅದನ್ನು ಕಿತ್ತೊಗೆದು ದಿಗಂಬರೆಯಾಗಿ ಅಕ್ಕ ಅರಮನೆಯಿಂದ ಹೊರಬರುತ್ತಾಳೆ. ಈ ದಿಗಂಬರತೆಯಲ್ಲೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಆಕೆಯ ವಚನಗಳೇ ಹೀಗೆ ಹೇಳುತ್ತದೆ.

"ನಾಣ ಮರೆಯ ನೂಲು ಸಡಿಲೆ ನಾಚುವರು ನೋಡಾ
ದೇವರ ಹೆಣ್ಣೆಂಬ ಜಾತಿ
ಪ್ರಾಣದೊಡೆಯ ಜಗದೊಳಗೆ ಮುಳುಗುತ್ತ ತೆರಹಿಲ್ಲದಿರಲು
ದೇವರ ಮುಂದೆ ನಾಚಲೆಡೆಯುಂಟೆ?
ಚೆನ್ನಮಲ್ಲಿಕಾರ್ಜುನಂಗೆ ಜಗವೆಲ್ಲ ಕಣ್ಣಾಗಿ ನೋಡುತ್ತಿರಲು
ಮುಚ್ಚಿ (ಮರೆಸಬಹುದೆ) ಹೇಳಯ್ಯ
ಕೈ ಸಿರಿಯ ದಂಡವ ಕೊಳಬಹುದಲ್ಲವೆ
ಮೈಸಿರಿಯ ದಂಡವ ಕೊಳಲುಂಟೆ?
ಉಟ್ಟಂತ ಉಡುಗೆ ತೊಡುಗೆಯನ್ನೆಲ್ಲ ಸೆಳೆದು ಕೊಳಬಹುದಲ್ಲದೆ
ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದು ಕೊಳಬಹುದೇ?
ಚೆನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ
ಉಡುಗೆ ತೊಡಿಗೆಯ ಹಂಗೇಕೋ ಮರುಳೇ?"

ಈ ರೀತಿಯಾಗಿ ದಿಗಂಬರಳಾಗಿ ಹೊರುಡುತ್ತಾಳೆ. ಅರಮನೆಯಿಂದ ಉಡುತಡಿಯಿಂದ ಅಕ್ಕ ಎಲ್ಲ ಬಂಧು ಬಾಂಧ್ವರ ಸಂಬಂಧವನ್ನು ತೊರೆದು ಹೋಗುತ್ತಾಳೆ. ಆಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ ದಿಟ್ಟ ಹಾಗೂ ದೃಢವಾದ ಹೆಜ್ಜೆಗಳನ್ನು ಅಕ್ಕ ಇಡಲು ಪ್ರಾರಂಭಿಸಿದ್ದರೂ ತನ್ನಜೀವನದ ಲಕ್ಷ್ಯ ಸ್ಪಷ್ಟವಾಗಿದ್ದರೂ, ಹಸಿವು, ನಿದ್ರೆ, ತೃಷೆಗಳನ್ನು ಆಕೆ ಗೆದ್ದಿರಲಿಲ್ಲ. ಅದಕ್ಕೆ

"ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆ ಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯ॥
ಆತ್ಮ ಸಂಗಾತಕ್ಕೆ ನೀನೇನಗುಂಟು"

ಎಂದು ದಿಟ್ಟ ಹೆಜ್ಜೆಯನ್ನು ಮುಂದಿಡುತ್ತಾಳೆ. ಬಹುಬೇಗನೆ ಆತ್ಮ ಸ್ಥೈರ್ಯವನ್ನು ಮೈಗೂಡಿಸಿಕೊಂಡು ಶಿವನಿಗೇ ಸವಾಲನ್ನು ಹಾಕುತ್ತಾಳೆ.

"ಆರೂ ಇಲ್ಲದವಳೆಂದೂ ಅಳಿಗೊಳಲು ಬೇಡ ಕಂಡಯ್ಯ
ಏನು ಮಾಡಿದೊಡೆಯು ನಾನಂಜುವವಳಲ್ಲ
ತರಗೆಲೆಯ ಮೆಲ್ಲಿದ್ದು ನಾನೆಹೆನು
ಚೆನ್ನಮಲ್ಲಿಕಾರ್ಜುನಯ್ಯ ಕರಕಡೆ ನೋಡಿದೊಡೆ
ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು"

ಇದು ಬರಿಯ ಬಾಯಿ ಮಾತಲ್ಲ, ಆಕೆಯ ಮನೋಧರ್ಮ ಅಷ್ಟು ನಿಚ್ಚಳವಾಗಿತ್ತು. ವೈರಾಗ್ಯದರ್ಥ ಮನಸ್ಸಿನಾಳಕ್ಕೆ ಇಳಿದಿತ್ತು. ಅದು ಎಂತಹ ವೈರಾಗ್ಯ? ಹೆಣ್ಣಾದರೂ ಅಬಲೆಯಾದರೂ ತೋರಿದ್ದು, ವೀರ ವೈರಾಗ್ಯ ಅವಳು ವೀರವಿರಾಗಿಣಿಯೇ ಅದಕ್ಕೆ

"ಕಿಡಿಕಿಡಿ ಕೆದರಿದೆಡೆ
ಎನಗೆ ಹಸಿವು ಅಡಗಿತ್ತೆಂಬೆನು
ಮುಗಿಲು ಹರಿದು ಬಿದ್ದರೆ
ಎನಗೆ ಮಜ್ಜನಕ್ಕೆರೆದರೆಂಬೆನು
ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು
ಚೆನ್ನಮಲ್ಲಿಕಾರ್ಜುನಯ್ಯ ಶಿರ ಹರಿದು ಬಿದ್ದರೆ
ಪ್ರಾಣ ನಿಮಗರ್ಪಿತವೆಂಬೆನು"

ಎಂದು ಹೇಳುವ ಮಾತುಗಳ ಅಕ್ಕನಂತಹ ವ್ಯಕ್ತಿಗೆ ಮಾತ್ರ ಸಾಧ್ಯ. ಅವಳ ಜೀವಿತದ ಪರಮಗುರಿ ಚೆನ್ನಮಲ್ಲಿಕಾರ್ಜುನನ್ನು ಸೇರಿಕೊಳ್ಳುವುದು. ಈ ಧ್ಯೇಯವನ್ನು ಇಟ್ಟು ಹೊರಟ ಅಕ್ಕನನ್ನು ಸಮಾಜ ನಿಂದಿಸಿರಬಹುದು. ಜೊತೆಗೆ ಅವಳ ದೇಹವನ್ನು ಕೆಲವು ಕುಹಕಿಗಳು ಬಯಸಿರಬಹುದು. ಈ ನಶ್ವರವಾದ ದೇಹದ ಬಗ್ಗೆ ಅವಳು ತಳೆದ ಭಾವ ನಿಜಕ್ಕೂ ಆ ವೈರಾಗ್ಯನಿಧಿಗೆ ಮಾತ್ರ ಸಾಧ್ಯವಾಗುವಂತಹದು.

"ಹಣ್ಣಮೆದ್ದ ಬಳಿಕ ಆ ಮರವನಾರು ತರಿದರೇನು?
ಹೆಣ್ಣ ಬಿಟ್ಟ ಬಳಿಕೆ ಆಕೆಯನಾರು ಕೂಡಿಕೊಂಡರೇನು?
ಮಣ್ಣ ಬಿಟ್ಟ ಬಳಿಕ ಆ ಕೆಯ್ಯಿಯನಾರುತ್ತರೇನು?
ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ
ನಾಯಿ ತಿಂದರೇನು, ನೀರಕುಡಿದರೇನು?"

ಎಂದು ಪ್ರಶ್ನಿಸುವ ಅಕ್ಕನ ಪರಿ. ಆಕೆ ಗಳಿಸಿದ ಆತ್ಮ ಜ್ಞಾನ ದೊಡ್ಡದು. ಲೌಕಿಕ ಬದುಕಿನ ನಶ್ವರತೆಯ ಅರಿವು ಆಕೆಗೆ ಇತ್ತು. ಒಬ್ಬ ಸಾಮಾನ್ಯ ಹೆಣ್ಣು ಮಗಳಾದರೆ ಅವಳು ಕೌಶಿಕನ ಅರಮನೆಯಲ್ಲಿ ಸುಖಭೋಗದಿಂದ ಇರುತ್ತಿದ್ದಳು. ಎಲ್ಲ ಭೋಗ ಭಾಗ್ಯವನ್ನು ಧಿಕ್ಕರಿಸಿ, ಶಾಶ್ವತವಾದ ಸುಖವನ್ನು ಹುಡುಕಹೊರಟವಳು. ಈಕೆಗೆ ರಾಗಭೋಗಗಳೇ ಇರಲಿಲ್ಲವೆಂದರ್ಥವಲ್ಲ. ಆದರೆ ಅದೆಲ್ಲವನ್ನು ಮೆಟ್ಟಿ ನಿಂತಳು. ಆದ್ದರಿಂದಲೇ ಈಕೆ ವೀರೆ, ಧೀರೆ, ವಿರಾಗಿಣಿ ಇದನ್ನು ಸಾಧಿಸಬೇಕಾದರೆ ಯೋಗ ತ್ಯಾಗಗಳ ದಾರಿಯನ್ನು ಹಿಡಿದಳು. ಇವಳದು ಸ್ವಭಾವ ವೈರಾಗ್ಯವೇ ಹೊರತು ಅಭಾವ ವೈರಾಗ್ಯವಲ್ಲ. ಇದು ಎಲ್ಲರಿಗೂ ಸಾಧ್ಯವಾಗುವಂತಹದ್ದಲ್ಲ.

ಅಕ್ಕನ ವಚನಗಳ ಭಾವ ವೈಯಕ್ತಿಕ ಹೋರಾಟ, ಇವಳ ವಚನಗಳಲ್ಲಿ ಸಮಾಜ ವಿಮರ್ಶೆಯ ಅಂಶ ಕಡಿಮೆ. ಆದರೂ ಕೂಡ ಕೆಲವೊಂದು ವಚನಗಳಲ್ಲಿ ಸಮಾಜದ ವಿರುದ್ಧ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾಳೆ. ಅಕ್ಕ ಬದುಕಿದ ರೀತಿ ಸಮಾಜದ ನಂಬಿಕೆ ಮೌಲ್ಯಗಳಿಗೆ ವಿರುದ್ಧವಾದುದಾಗಿತ್ತು. ಆದ್ದರಿಂದ ಲೌಕಿಕ ತಿರಸ್ಕಾರ, ನಿಂದನೆಗಳನ್ನು ಎದುರಿಸಬೇಕಾಯಿತು. ಅಂತಹ ಒಂದು ವಚನ ಹೀಗಿದೆ.

"ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂತಯ್ಯ?
ಸಮುದ್ರ ತಡಿಯಲೊಂದು ಮನೆಯ ಮಾಡಿ
ನೊರೆತೊರೆಗಳಿಗಂಜಿದೊಡೆಂತಯ್ಯ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದೊಡೆಯಂತಯ್ಯ
ಚನ್ನಮಲ್ಲಿಕಾರ್ಜುನದೇವ ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು."

ಈ ವಚನವು ಅಕ್ಕನ ಸಮಚಿತ್ತ ಭಾವವನ್ನು ವ್ಯಕ್ತಪಡಿಸುತ್ತದೆ. ಈ ಎಲ್ಲ ನಿಂದೆಯನ್ನು ಸಹಿಸಿ ಅಕ್ಕನ ಆತ್ಮ ಊರ್ಧ್ವಮುಖದತ್ತ ಚಲಿಸಲು ಹಾತೊರೆಯುತ್ತಿದೆ. ಸಮಾಜದ ಎಲ್ಲಾ ತಿರಸ್ಕಾರಗಳನ್ನು ಮೆಟ್ಟಿನಿಲ್ಲುವಂತಹ ಆತ್ಮ ಸ್ಥೈರ್ಯದ ಬೆಳವಣಿಗೆಯನ್ನು ಕಾಣಬಹುದಾಗಿದೆ.

ಅಕ್ಕ ಕಾಯದ ಮೇಲಿನ ಅಭಿಮಾನವನ್ನು ಕಳೆದುಕೊಂಡಳು ನಿಜ. ಆದರೆ ಲೋಕಕ್ಕೆ ಕಂಡ ಆಕೆಯ ದೇಹದ ಚೆಲುವು ಎಂತಹದ್ದು, ಏರುಜವ್ವದ ಯುವತಿ. ಇಂತಹ ವ್ಯಕ್ತಿ ಏಕಾಂಗಿಯಾಗಿ ಈ ಸಮಾಜವನ್ನು ಎದುರಿಸುವಾಗ ಆಕೆ ಪಟ್ಟಪಾಡು ಎಂತಹದಾಗಿರಬೇಕು. ಊಹೆಗೂ ನಿಲುಕದ್ದು. ಅದನ್ನು ಆಕೆಯ ವಚನಗಳೇ ಸಾಬೀತು ಪಡಿಸುತ್ತದೆ. ಒಬ್ಬ ಕೌಶಿಕನಿಂದ ತಪ್ಪಿಸಿಕೊಂಡು ಬಂದ ಅಕ್ಕನಿಗೆ ಈ ಲೋಕದಲ್ಲಿ ಇಂತಹ ನೂರಾರು ಕೌಶಿಕರು ಹಿಂಸೆಗೆಗುರಿ ಮಾಡಿರಬೇಕು. ಆಗ ಅವಳ ನೋವಿನ ಒಂದೆರಡು ವಚನಗಳು ಇಲ್ಲಿವೆ.

"ನೋಡುವ ಕಂಗಳಿಗೆ ರೂಪಿಂಬಾಗಿರಲು
ನೀವು ಮನ ನಾಚದೆ ಬಂದಿರಣ್ಣಾ
...ಚನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಹ ಪುರುಷರೆನೆಗೆ ಸಹೋದರರು
ಛೀ ಹೋಗಾ ಮರುಳೇ"

ಇಂತಹುದೇ ಇನ್ನೊಂದು ವಚನ ಹೀಗಿದೆ.

"ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ?
ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ?
ಬಲುಹಳಿದು ಭವಗೆಟ್ಟು ಛಲವಳಿದು
ಭಕ್ತೆಯಾಗಿ ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ?"

ಈ ವಚನವೂ ಅಕ್ಕನ ನೋವಿನ ಆಳದಿಂದ ಬಂದಿದೆ. ಅಂತರಂಗದಲ್ಲಿ ಕಲ್ಮಶ ತುಂಬಿದ ಜನರ ನಡುವೆ ಹೇಗೆ ಬಾಳಿದಳು ದೇವರೇ ಬಲ್ಲ.

ಅಕ್ಕನ ಜೀವನದ ಮೂರನೇ ಘಟ್ಟದಲ್ಲಿ ತನ್ನ ಸಂಗಾತಿಯನ್ನು ಹುಡುಕುವ ಪರಿ. ಚನ್ನಮಲ್ಲಿಕಾರ್ಜುನಿನಗಾಗಿ ಅವಳು ಪಡುವ ಪಾಡು. ಅವಳ ಕಾತುರ ಮನಮಿಡಿಯುತ್ತದೆ. ಯಾರ ಸಹಾಯವೂ ಇಲ್ಲದೆ ಏಕಾಂಗಿಯಾಗಿ ಕಾಡು ಮೇಡುಗಳನ್ನು ಅಲೆಯುತ್ತಾಳೆ. ಈ ಹೋರಾಟ ಅಧ್ಯಾತ್ಮ ಜೀವಿಯ ಅಧ್ಬುತ ಸಾಧನೆಯೇ ಸರಿ. 'ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೇ ನೋಡಾ' ಎಂಬ ಅವಳ ಮಾತು ಸತ್ಯ. ಈ ತಪಸ್ಸಿನ ಪೂರ್ವಾರ್ಧದಲ್ಲಿ ದೇಹದ ವ್ಯಾಮೋಹ, ಜೀವಾಭಿಮಾನ, ಅಹಂಕಾರ,

ಮಮಕಾರಗಳನ್ನು ನಾಶಗೊಳಿಸುವುದರಲ್ಲಿ ಕಳೆದಿದ್ದಾಳೆ. ಉತ್ತರಾರ್ಧದಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಹೆಣಗಾಡಿದ್ದಾಳೆ.

"ಅಷ್ಟವಿದಾರ್ಚನೆಯ ಮಾಡಿ ಒಲಿಸುವೆ ಅಯ್ಯ?
ನೀನು ಬಹಿರಂಗ ವ್ಯವಹಾರ ದೂರಸ್ಥನು ಅಯ್ಯ
... ಹೃದಯ ಕಮಲದಲ್ಲಿ ಬಿಟ್ಟುಕೊಂಬೆನೆ ಅಯ್ಯ?
ನೀನು ಸರ್ವಾಂಗ ಪರಿಪೂರ್ಣನು, ಅಯ್ಯ ನಿನ್ನ ಒಲಿಸಲೆನ್ನಳವಲ್ಲ
ನೀನೊಲಿವುದೇ ಸುಖವಯ್ಯ ಚೆನ್ನಮಲ್ಲಿಕಾರ್ಜುನಾ"

ಎಂದು ತನ್ನ ಪ್ರಯತ್ನಗಳ ಅಸಹಾಯಕತೆಯನ್ನು ಒಪ್ಪಿಕೊಂಡು ಬೇಡಿಕೊಳ್ಳುತ್ತಾಳೆ. ಭಕ್ತಿಮಾರ್ಗದ ಕಷ್ಟವನ್ನು ವರ್ಣಿಸುತ್ತಾಳೆ. ಈ ಮಾರ್ಗವು ಅಷ್ಟು ಸುಲಭವಲ್ಲ. ಆದರೂ ಅವಳಿಗಿರುವುದು ಒಂದೇ ಶಕ್ತಿ, ಅದು ಭಕ್ತಿ, ಆ ಭಕ್ತಿಯಲ್ಲಿ ಅನನ್ಯತೆ ಇದೆ. ನೀನೊಲಿದು ಕೊಂಡಾಡಿದೆಡೆ, ಇರುಹೆ ರುದ್ರನಾಗದೆ ಹೇಳಯ್ಯ. ಎಂದು ಶಿವನನ್ನು ಬೇಡಿಕೊಂಡು ಪರಿತಪಿಸುವುದು. ಯಾವುದಕ್ಕೂ ಕಾಲ ಮಾಗಬೇಕಲ್ಲವೇ? ಅದು ಬರುವವರೆಗೂ ಕಾಯಬೇಕು ಅದು ಬರುವವರೆಗೆ ಅನುಭವಿಸಿದ ವಿರಹ, ಕಿಚ್ಚಿಲ್ಲದ ಬೇಗೆ, ಏರಿಲ್ಲದ ಗಾಯ, ಸುಖವಿಲ್ಲದ ಧಾವತಿ ಅವಳ ಶಿವಾಪೇಕ್ಷದ ತೃಷೆ ಹಗಲಿರುಳೆಲ್ಲಾ ಕಾಡಿತು.

"ಬಂದಹನೆಂದು ಬಟ್ಟೆಯ ನೋಡಿ
ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ।
ತಡವಾದೊಡೆ ಬಡವಾದೆ ತಾಯೆ.

ಎಷ್ಟು ಬಡವಾದರೇನು, ಶಿವನೊಲಿಯದ ಬಳಿಕ

ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ
ತಪಸ್ಸು ಮಾಡಿದ'ರಿಲ್ಲ. ಅದು ತನ್ನ ಬಹಕಾಲಕ್ಕಲ್ಲದೆ"

ಸಾಧ್ಯವಾಗದು ಶಿವನೊಲಿದಲ್ಲದೆ ಕೈಗೂಡದು' ಎಂಬ ಸತ್ಯ ಅಕ್ಕನಿಗೆ ಗೊತ್ತು. ತ್ರಿಕರಣ ಪೂರ್ವಕವಾಗಿ ತನ್ನ ಸರ್ವಸ್ವವನ್ನು ಪರಮಾತ್ಮನಲ್ಲಿ ನಿವೇದಿಸಿ, ಆತನನ್ನು ನೆನೆದು ಆತನಿಗೇ ತನ್ನನ್ನು ಸಮರ್ಥಿಸಿ ಬಯಸಿದಳು.

"ನಚ್ಚುಗೆ ಮನ ನಿಮ್ಮಲ್ಲಿ ಮೆಚ್ಚುಗೆ ಮನ ನಿಮ್ಮಲ್ಲಿ
ಸಲಗುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ ಬಳಲುಗೆ ಮನ ನಿಮ್ಮಲ್ಲಿ

ಕರುಣೆಗೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ
ಎನ್ನ ಪಂಚೇಂದ್ರಿಯಗಳು ಕಬ್ಬುನ ಉಂಡ ನೀರಂತೆ"

ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ ಎಂದು ಹತ್ತಾರು ಕಡೆ ಹರಿಯುವ ಮಂಗ ಮನಸ್ಸನ್ನು ಕಟ್ಟಿಹಾಕಿ ಚಿತ್ತದ ಏಕಾಗ್ರತೆಯನ್ನು ಸಾಧಿಸುವುದರಲ್ಲಿ ಯಶಸ್ವಿಯಾಗುತ್ತಾಳೆ. ಅವಳ ಕರೆ ಶಿವನನ್ನು ಮುಟ್ಟಿತೋ, ಇಲ್ಲವೋ ಅವನನ್ನು ಧ್ಯಾನಿಸುವುದನ್ನು ಮಾತ್ರ ನಿಲ್ಲಿಸಲಿಲ್ಲ. ಈ ಚಿತ್ತದ ಒಂದು ವಚನ ಹೀಗಿದೆ.

"ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು
ನಾ ನಿನ್ನ ಹಾಡಿದಲ್ಲದೆ, ಸೈರಿಸಲಾರೆನಯ್ಯಾ
ಅಯ್ಯಾ, ನೀನೊಲಿದರೆ ಒಲಿ, ಒಲಿಯದಿರ್ದೊಡೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ ।
ಅಯ್ಯಾ, ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿರ್ದೊಡೆ
ನಾ ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ ।
ಅಯ್ಯಾ ನೀ ನೋಡಿದೆಡೆ ನೋಡು
ನೋಡದಿರ್ದೊಡೆ ಮಾಣು
ನಾ ನಿನ್ನ ಹಿಗ್ಗಿ ಹಾರೈಸುವುದಲ್ಲದೆ ಸೈರಿಸಲಾರೆನಯ್ಯ !
ಚೆನ್ನಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ
ಹರುಷದೊಳೋಲಾಡುವೆನಯ್ಯ"

ಎಂದು ಭಾವ ಸಮಾಧಿಯಲ್ಲಿ ನಿಮಗ್ನಳಾಗಿ ತನ್ನ ಕರ್ತವ್ಯನಿಷ್ಠೆಯನ್ನು ತೋರಿದಳು. ಇಷ್ಟೆಲ್ಲಾ ಪರಿತಪಿಸಿದ ಅಕ್ಕನಿಗೆ ಕೊನೆಗೂ ಕನಸಿನಲ್ಲಿ ದಿವ್ಯಾನುಭವವುಂಟಾಯಿತು. ತನ್ನ ಬದುಕು ಸಾರ್ಥಕವಾಯಿತೆಂದು ಕೊಂಡಳು. ದಿವ್ಯ ಸ್ವರೂಪವನ್ನು ಆಕೆ ಚಿತ್ರಿಸುವ ರೀತಿ ಹೀಗಿದೆ.

"ಹೊಳೆವ ಕೆಂಜೆಡೆಗಳ ಮಣಿಮಕುಟದ
ಒಪ್ಪುವ ಸುಲಿಪಲ್ಲ ನಗೆಮೊಗದ
ಕಂಗಳ ಕಾಂತಿಯಿಂ ಈರೇಳು ಭುವನಂ ಬೆಳಗುವ
ದಿವ್ಯ ಸ್ವರೂಪನಂ ಕಂಡೆ ನಾನು"

ದಿವ್ಯ ರೂಪವನ್ನು ಕಂಡ ಅಕ್ಕ ಧನ್ಯನಾಗಿದ್ದಾಳೆ. ಅವಳ ತಪಸ್ಸಿನ ಫಲ ಲಭಿಸಿದೆ. ನಾ ನಿನಗೊಲಿದೆ ನೀ ಎನಗೊಲಿದೆ, ನೀನೆನ್ನನಗಲಿದಪ್ಪೆ, ನಾನಿನ್ನನಗಲಿದಪ್ಪೆನಯ್ಯ. ಅಕ್ಕನಿಗೆ ಜೀವನದಲ್ಲಿ ಇನ್ನು ಉತ್ಸಾಹವೋ ಉತ್ಸಾಹ. ಆನಂದವೋ ಆನಂದ. ಅದರಲ್ಲಿ ಭಾಗಿಯಾಗಲು ಎಲ್ಲರನ್ನು ಆಹ್ವಾನಿಸುತ್ತಾಳೆ.

ಅಕ್ಕನ ಜೀವನದ ನಾಲ್ಕನೇ ಘಟ್ಟ, ಅದು ಅಕ್ಕನ ಕಲ್ಯಾಣದಲ್ಲಿನ ಅನುಭವ ಮಂಟಪದಲ್ಲಿನದು. ಅಕ್ಕ ಕೆಲವು ಕಾಲ ಕಲ್ಯಾಣದ ಪರಿಸರದಲ್ಲಿ ಇದ್ದಳೆಂಬುದಕ್ಕೆ ಸಂದೇಹವಿಲ್ಲ. ಆದರೆ ಎಷ್ಟು ಕಾಲದವರೆಗೂ ಅಲ್ಲಿ ನೆಲೆಸಿದ್ದಳೆಂಬುದಕ್ಕೆ ದಾಖಲೆಗಳಿಲ್ಲ. ಕಲ್ಯಾಣದಲ್ಲಿ ಇದ್ದುದಕ್ಕೆ ಅಪಾರಗೌರವವೂ, ತೃಪ್ತಿಯೂ ಇದ್ದಿತು. ಎಂಬುದಕ್ಕೆ ಸಾಕ್ಷಿಯಾಗಿ ಅವಳ ಒಂದು ವಚನ ಹೀಗಿದೆ.

"ಕಲ್ಯಾಣವೆಂಬುದಿನ್ನಾರಿಗೂ ಹೊಗಬಾರದು ಅಸಾಧ್ಯವಯ್ಯ
ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು.
ಒಳಗೂಹೊರಗೂ, ಶುದ್ಧವಾದಂಗಲ್ಲದೆ ಕಲ್ಯಾಣಕ್ಕೆ ಹೊಗಬಾರದು
ನಾನೆಂಬುದು ಹರಿದವಂಗಲ್ಲದೆ ಕಲ್ಯಾಣಕ್ಕೆ ಹೊಗಬಾರದು
ಒಳಗು ತಿಳಿದು ಚನ್ನಮಲ್ಲಿಕಾರ್ಜುನಂಗೊಲಿದು
ಉಭಯಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು
ನಮೋ ನಮೋ ಎನಿತಿರ್ದೆನು"

ಎಂದು ಕಲ್ಯಾಣದ ಮಹಿಮೆಯನ್ನು, ಅದರ ಮಹತ್ವ, ಅದರ ಪಾವಿತ್ರ್ಯತೆಯನ್ನು ಎತ್ತಿಹಿಡಿದಿದ್ದಾಳೆ. ತನ್ನ ದಾರಿಯನ್ನು ತಾನು ಕಂಡುಕೊಂಡ ಅಕ್ಕನಿಗೆ ಶರಣರ ಸಂಗ ಮಾರ್ಗದರ್ಶನದ ಅವಶ್ಯಕತೆ ಇತ್ತೋ ಇಲ್ಲವೋ, ಆದರೂ ಆಕೆ ಅಲ್ಲಿ ನೆಲೆನಿಂತಳು. ಅಲ್ಲಿನ ಎಲ್ಲರ ಪ್ರೀತಿ ವಿಶ್ವಾಸಕ್ಕೆ ಪಾತ್ರಳಾಗಿದ್ದಳು. ಶರಣರ ಬಗೆಗೆ ಆಕೆಯ ಗೌರವ ಕೃತಜ್ಞತೆಗಳನ್ನು ವಚನಗಳ ಮೂಲಕ ಸಲ್ಲಿಸಿದ್ದಾಳೆ. ಅಲ್ಲಮ, ಚೆನ್ನಬಸವಣ್ಣ, ಸಿದ್ಧರಾಮ, ಬಸವ, ಮುಂತಾದ ಎಲ್ಲ ಶರಣರನ್ನು ತುಂಬುಹೃದಯದಲ್ಲಿ ನೆನೆದಿದ್ದಾಳೆ. ಅಂತಹ ನೆನೆಪಿನಲ್ಲಿ ಮೂಡಿ ಬಂದ ಒಂದು ಸುಂದರ ಅಭಿವ್ಯಕ್ತಿ ಈ ವಚನವಾಗಿದೆ.

"ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದಲ್ಲಿ
ಸುಜ್ಞಾನವೆಂಬ ತುಪ್ಪದಲ್ಲಿ

ಪರಮಾರ್ಥವೆಂಬ ಸಕ್ಕರೆಯನ್ನಿಕ್ಕಿದಿರಿ ನೋಡಾ
ಇಂತಪ್ಪ ತ್ರಿವಿದಾಮೃತ ದಣಿಯಲೆರೆದು ಸಲಹಿದಿರಿ
ಎನ್ನ ವಿವಾಹವ ಮಾಡಿದಿರಿ
ಸಯವಪ್ಪ ಗಂಡಂಗೆ ಕೊಟ್ಟಿರಿ
ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ
ಬಸವಣ್ಣ ಮೆಚ್ಚಲು ಒಗತನವ ಮಾಡುವೆ
ಚನ್ನಮಲ್ಲಿಕಾರ್ಜುನನ ಕೈಹಿಡಿದು
ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನು
ಅವಧರಿಸಿ ನಿಮ್ಮಡಿಗಳೆಲ್ಲರು
ಮರಳಿ ಬಿಜಯಂಗೈವುದು ಶರಣು ಶರಣಾರ್ತಿ"

ಅನುಭವ ಮಂಟಪಕ್ಕೆ ಬಂದ ಅಕ್ಕನನ್ನು ಹಲವಾರು ಬಗೆಯಲ್ಲಿ ಅಲ್ಲಮನು ಪರೀಕ್ಷಿಸುತ್ತಾನೆ. ಆ ಎಲ್ಲಾ ಪರೀಕ್ಷೆಯಲ್ಲೂ ಆಕೆ ಗೆಲ್ಲುತ್ತಾಳೆ. ಇದಕ್ಕೆ ನಿದರ್ಶನವನ್ನು ಅಲ್ಲಮ ಮತ್ತು ಅಕ್ಕನ ವಚನ ಎರಡರಲ್ಲೂ ಕಾಣಬಹುದು. ಈ ಶರಣ ಪರಿಸರದಲ್ಲಿ ಅತ್ಯಂತ ಕಿರಿಯಳಾದರೂ, ಅನುಭವದಲ್ಲಿ ಅವಳಿಗೆ ಹಿರಿತನವಿತ್ತು. ಆದ್ದರಿಂದಲೇ ಎಲ್ಲರಿಗೂ ಆಕೆ ಅಕ್ಕನೆಂದೆನಿಸಿಕೊಂಡಳು. ತನ್ನ ಸಾಧನೆಯ ಮೂಲಕ ಹೆಣ್ಣುತನಕ್ಕೆ ಹಿರಿತನವನ್ನು ತಂದವಳು ಈಕೆ. ಈಕೆಯನ್ನು ಕಂಡ ಅನುಭವ ಮಂಟಪದ ಶರಣರು ಆನಂದ ಸಾಗರದಲ್ಲಿ ತೇಲಿಹೋದರು. ಅವಳನ್ನು ಮನಬಂದಂತೆ ಸ್ತುತಿಸಿದರು. ಅವಳಿಗೆ ವಚನಗಳ ಮೂಲಕ ಗೌರವವನ್ನು ಸಲ್ಲಿಸಿದರು. ಅಂತಹ ಕೆಲವು ಶರಣ ವಚನಗಳನ್ನು ಇಲ್ಲಿ ನೋಡಬಹುದು. ಮೊದಲಿಗೆ ಅಕ್ಕನ ಬಗ್ಗೆ ವ್ಯಕ್ತವಾಗಿರುವ ಬಸವಣ್ಣನವರ ಗೌರವದ ಒಂದು ವಚನ ಹೀಗಿದೆ.

"ರೂಪಿಲ್ಲದವಂಗೆ ಒಲಿದವರಿಂಗೆ ತನುವಿನ ಹಂಗುಂಟೆ
ಮನವಿಲ್ಲದವಂಗೆ ಮೆಚ್ಚಿದವರಿಂಗೆ ಅಭಿಮಾನದ ಹಂಗುಂಟೆ
ದಿಗಂಬರಂಗೆ ಮೆಚ್ಚಿದವರಿಗೆ ಕೌಪೀನದ ಹಂಗುಂಟೆ
ಕೂಡಲಸಂಗಮದೇವಯ್ಯ
ಮಹಾದೇವಿಯಕ್ಕನ ಭಕ್ತಿಗೆ ಆವ ಹೊರೆಯೂ ಇಲ್ಲ ಪ್ರಭುವೇ"

ಹಾಗೆಯೇ ಅಲ್ಲಮನು ಅಕ್ಕನ ಬಗ್ಗೆ ತುಂಬ ಗೌರವ ವ್ಯಕ್ತಪಡಿಸಿದ್ದಾನೆ.

"ಅಂತರಂಗದ ಪ್ರಭೆ ಬಹಿರಂಗವೆಲ್ಲ ತಾನೆಯಾಗಿ
ಗೊಗ್ಗೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ
ಮಹಾದೇವಿಯಕ್ಕನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು"

ಎಂದಿದ್ದಾನೆ. ಚೆನ್ನಬಸವಣ್ಣನ ಅಕ್ಕನ ಹಿರಿತನವನ್ನು ಕೊಂಡಾಡಿದ್ದಾನೆ. ಆ ಒಂದು ವಚನ ಹೀಗಿದೆ.

"ನಡುಮುರಿದು ಗುಡುಗೂರಿ ತಲೆನಡುಗಿದವರೆಲ್ಲ ಹಿರಿಯರೆ?
ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ
ಒಂಭತ್ತನಾಡುವ ಅಜ್ಞಾನಿಗಳಲ್ಲಿ ಹಿರಿಯರೆ?
ಅಣುವನರಿದು ಘನವ ಬೆರೆಸಿ ಹಿರಿದು ಕಿರಿದೆಂಬ
ಭೇದವ ಮುರಿದು, ಕೂಡಲ ಸಂಗಯ್ಯನಲ್ಲಿ
ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ
ನಮ್ಮ ಮಹಾದೇವಿಯಕ್ಕಂಗಾಯಿತು. ಕೇಳಾ ಪ್ರಭುವೇ"

ಈ ಎಲ್ಲಾ ನಿದರ್ಶನಗಳು ಅಕ್ಕ ಶರಣ ಪರಿಸರದಲ್ಲಿ ಮಾನ್ಯತೆ, ಪ್ರೀತಿ, ಗೌರವವನ್ನು ಪಡೆದಿದ್ದಳು ಎಂಬುದಕ್ಕೆ ಸಾಕ್ಷಿಯಾಗಿದೆ.

ಅಕ್ಕ ಕಲ್ಯಾಣದ ಅನುಭವ ಮಂಟಪದಲ್ಲಿ ತನ್ನ ಅನುಭವ ವಿದ್ಯೆಯನ್ನು ಬೀರಿ ಬಸವಣ್ಣ, ಪ್ರಭುದೇವಾದಿಗಳಿಂದ ಗೂಢ ತತ್ವ ಉಪದೇಶಗಳನ್ನು ಪಡೆಯುತ್ತಾಳೆ. ಅಕ್ಕ ಬಸವನ ಪರಮ ಭಕ್ತೆಯಾಗಿದ್ದಳು. ವೈರಾಗ್ಯನಿಧಿ, ಪ್ರಭುವಿನಿಂದ ಜ್ಞಾನ ಮಾರ್ಗವನ್ನು ಅರಿಯುತ್ತಾಳೆ. ಅವರಿಬ್ಬರ ನಡುವೆ ಅನುಭವ ಮಂಟಪದಲ್ಲಿ ನಡೆದ ಸಂವಾದ ಒಂದು ಅದ್ಭುತವಾದ ವಿಚಾರ. ಸತ್ಯದ ಸಾಕ್ಷಾತ್ಕಾರವನ್ನು ಅಕ್ಕ ಗಳಿಸಿಕೊಳ್ಳುತ್ತಾಳೆ. ಅನುಭವ ಮಂಟಪದಲ್ಲಿ ನಡೆದ ಸಂವಾದದಲ್ಲಿ ವ್ಯಕ್ತಗೊಂಡ ಒಂದು ವಚನ ಹೀಗಿದೆ.

'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನಸಂಗವೇ ಲೇಸು ಕಂಡಯ್ಯ
ಕಾಯ ಸಂಗವ ವಿವರಿಸಬಲ್ಲರೆ
ಕಾಯ ಸಂಗವೇ ಲೇಸು ಕಂಡಯ್ಯ
ತಾಯ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯ, ನೀನೊಲಿದವರು

ಕಾಯಗೊಂಡಿರ್ದರೆನಬೇಡ"

ಅಕ್ಕನ ನಿರ್ಮಲ ಚಾರಿತ್ರ್ಯವನ್ನು, ಆಧ್ಯಾತ್ಮಿಕ ಜೀವನವನ್ನು ಶರಣರು ವಿಶೇಷವಾಗಿ ಗೌರವಿಸುತ್ತಾರೆ. ಸ್ವಸ್ವರೂಪ ಜ್ಞಾನವನ್ನು ಅರಿತುಕೊಂಡ ಅಕ್ಕನಿಗೆ ಅದ್ವೈತದಿಂದ 'ತನ್ನ ತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನಲಿಂಗ ತಾನೇ ಬೇರಿಲ್ಲ'. ಎಂಬ ಭಾವ ಬಲವಾಗುತ್ತದೆ. ತನ್ನಲ್ಲಿ ಇದ್ದುದು ಇರುವುದೆಲ್ಲ ಅನಂತ ಮಹಿಮ ಚೆನ್ನಮಲ್ಲಿಕಾರ್ಜುನ ಎನ್ನುವ ಸಾಕ್ಷಾತ್ಕಾರವಾಗುತ್ತದೆ.

"ನೆಲದ ಮರೆಯ ನಿಧಾನದಂತೆ
ಫಲದ ಮರೆಯ ರುಚಿಯಂತೆ
ಶಿಲೆಯ ಮರೆಯ ಹೇಮದಂತೆ
ಭಾವದ ಮರೆಯ ಬ್ರಹ್ಮವಾಗಿಪ್ಪ"

ಚನ್ನಮಲ್ಲಿಕಾರ್ಜುನನ ನಿಲುವನ್ನು ಅರಿತುಕೊಂಡಿದ್ದಾಳೆ. ಅಕ್ಕ ಇನ್ನು ಮಾಡಬೇಕಾದುದೇನೂ ಇಲ್ಲ ಅವಳ ತನು-ಮನ, ಪ್ರಾಣ ಅರಿವು ಎಲ್ಲವು ಚೆನ್ನನಲ್ಲಿ ಲೀನವಾಯಿತು.

"ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನರಿವೆ?
ಚೆನ್ನಮಲ್ಲಿಕಾರ್ಜುನಾ, ನಿಮ್ಮಿತ್ತಾ, ನೀವಾಗಿ ನಿಮ್ಮಿಂದ ಮರೆದೆನಯ್ಯ"

ಎನ್ನುತ್ತಾ ಅಕ್ಕ ಕಲ್ಯಾಣಕ್ಕೆ ಬಂದು ತನ್ನ ಜೀವನದ ಕಲ್ಯಾಣವನ್ನೇ ಸಂಧಿಸಿಕೊಂಡಳು. ಶರಣರಿಂದ ಬೀಳ್ಕೊಂಡು ಶ್ರೀಶೈಲಕ್ಕೆ ಪಯಣ ಮಾಡುತ್ತಾಳೆ. ಅಕ್ಕನು ತನ್ನ ಆಧ್ಯಾತ್ಮಿಕ ಬದುಕಿನ ಕೊನೆಯ ಘಟ್ಟದಲ್ಲಿ ಸುಂದರ ಸೃಷ್ಟಿಯ ಅಣುರೇಣುವಿನಲ್ಲೂ ಮಲ್ಲಿಕಾರ್ಜುನನನ್ನು ಕಾಣುತ್ತಾಳೆ.

"ವನವೆಲ್ಲ ನೀವೇ, ವನದೊಳಗಣ ದೇವತರುವೆಲ್ಲಾ ನೀವೇ
ತರುವಿನೊಳಗಾಡುವ ಖಗಮೃಗವೆಲ್ಲ ನೀವೆ
ಚೆನ್ನಮಲ್ಲಿಕಾರ್ಜುನ...

ಸೃಷ್ಟಿಯ ಚರಾಚರ ವಸ್ತುವಿನಲ್ಲೂ ಭಗವಂತನ ಚೈತನ್ಯಯವನ್ನು ಗುರುತಿಸುತ್ತಾಳೆ"

"ಇಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದ ವರಾರಯ್ಯ ।
ಕಬ್ಬು ಬಾಳೆ ಹಲಸು ನಾರಿಕೇಲಕ್ಕೆ ಸಿಹಿನೀರೆರದವರಾರಯ್ಯ ।
ಕಳವೆ ಶಾಲಿಗೆ ಒಗರದ ಉದಕವನೆರದವರಾರಯ್ಯ ।
ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದುದಕವನೆರದವರಾರಯ್ಯ ।

ಸೃಷ್ಟಿ ಸೌಂದರ್ಯಾಸ್ವಾದನೆಯ ರಸಾವೇಶದ ಪರವಶದಲ್ಲಿ ತನ್ನ ಈ ಆನಂದಕ್ಕೆ ಕಾರಣವಾದ ಚೆನ್ನನನ್ನು ಅರಸುತ್ತಾಳೆ.

"ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ, ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ
ಕೊಳನತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ, ನೀವು ಕಾಣಿರೆ
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ, ನೀವು ಹೇಳಿರೆ"

ಹೀಗೆ ಹಾಡುತ್ತಾ ಶ್ರೀಶೈಲದ ವನವನ್ನು ಅರಸುತ್ತಾಳೆ. ಅಲ್ಲಿಯ ಕದಳಿಯ ಬನವನ್ನು ಕಂಡ ತಕ್ಷಣ ಅವಳ ಮನಸ್ಸಿನಲ್ಲಿ ಮೂಡಿದ ಭಾವವಿರಬೇಕು ಈ ವಚನ

"ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೇವಣಿ
ಶಿಲೆಗಳಲ್ಲಿ ಪುರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ
ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ, ಪರುಷಮೃಗ
ಎಡಹುವ ಹರಳೆಲ್ಲ, ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ
ಮೆಚ್ಚಿನ ಗಿರಿಯ ಸುತ್ತಿನೋಡುತ್ತ ಬಂದು
ಕದಳಿಯ ಬನವ ಕಂಡೆ ನಾನು"

ಎನ್ನುತ್ತಾ ಕದಳಿಯಲ್ಲಿ ಏಕಾಂತ ತಾಣವೊಂದನ್ನೂ ಹುಡುಕಿದ್ದಾಳೆ. ಅಲ್ಲಿಯೇ ಬಹುಶಃ, ಯೋಗಧ್ಯಾನ ಮಾಡಿರಬೇಕು, ಬೆರೆಸುವರೆ ಬೇಗ ತೋರಾ ಹೊರ ಹಾಕದಿರಯ್ಯ, ನಿಮ್ಮಲ್ಲಿ ನೆಲೆಸುವ ತೊತ್ತಾನು ಎಂದು ಚೆನ್ನನನ್ನು ಕೂಡಿಕೊಳ್ಳುವ ಬಾಳು, ಭವ್ಯವಾಣಿಯ ಅಕ್ಕ ಜನ ಮಾನಸದಲ್ಲಿ ಚಿರಂಜೀವಿಯಾದಳು. ಆದರ್ಶ ಮಾತೆಯಾದಳು, ಅವಳ ಒಂದು ವಚನ ಹೀಗಿದೆ.

"ಲಿಂಗವೆನ್ನ, ಲಿಂಗೈಕ್ಯವೆನ್ನ, ಸಂಗವೆನ್ನ, ಸಮರಸವೆನ್ನ,

ಆಯಿತ್ತೆನ್ನ, ಆಗದೆನ್ನ, ನಾನೆನ್ನ, ನೀನೆನ್ನ, ಚನ್ನಮಲ್ಲಿಕಾರ್ಜುನನಲ್ಲಿ
ಲಿಂಗೈಕ್ಯವಾದ ಬಳಿಕ ಏನೂ ಎನ್ನೆ...

ಎನ್ನುವ ಅಕ್ಕ ಮೌನವಾಗಿ ಮಹಾದೇವಿ ಯಾಗುತ್ತಾಳೆ ಈ ರೀತಿಯಾಗಿ ಅಕ್ಕನ ಮನದ ಮಾತು, ಆಸೆ, ಆಲೋಚನೆಗಳು ಅವಳ ಕಾವ್ಯವಾಯಿತು. ಅದರಲ್ಲಿ ಕೃತಕತೆ ಇಲ್ಲ. ತನ್ನ ಬದುಕಿನ ಸ್ತರಗಳನ್ನು ನಿರೂಪಿಸಿದ ಕೃತಕೃತ್ಯತೆಯಿದೆ ಅಷ್ಟೆ. ಅವಳು ಯಾರಿಗಾಗಿಯೂ ಹಾಡಲಿಲ್ಲ. ತನಗಾಗಿ ತನ್ನ ಬದುಕಿನ ಲಕ್ಷ್ಯಕ್ಕಾಗಿ ಹಾಡಿದಳು ಅಷ್ಟೆ, ತತ್ವಗಳ ಪ್ರಚಾರವಾಗಲಿ, ಉಪದೇಶವಾಗಲಿ ಅವಳಿಗೆ ಬೇಕಿರಲಿಲ್ಲ. ಈ ಕಾರಣದಿಂದಾಗಿ ಅವಳ ಜೀವನ ಚಿತ್ರಣಗಳು ಅವಳ ವಚನದಲ್ಲಿ ಎದ್ದು ಕಾಣುತ್ತದೆ. ಈ ವಚನಗಳು ಪರಿಪೂರ್ಣ ಜೀವನ ಚಿತ್ರಣವನ್ನು ಒದಗಿಸದಿದ್ದರೂ ಅವಳ ಉತ್ತರಾರ್ಧದ ಜೀವನವನ್ನು ಸೊಗಸಾಗಿ ಕಟ್ಟಿಕೊಡುತ್ತದೆ. ಈ ವಚನಗಳನ್ನೇ ಆಧರಿಸಿ ನಮ್ಮ ಕಾದಂಬರಿಕಾರರು ಕೃತಿಗಳನ್ನು ರಚಿಸಿದ್ದಾರೆ. ಈ ವಚನಗಳನ್ನು ಎಷ್ಟು ಸಮರ್ಥವಾಗಿ ದುಡಿಸಿಕೊಂಡಿದ್ದಾರೆಂಬುದನ್ನು ಮುಂದಿನ ಅಧ್ಯಾಯದಲ್ಲಿ ನೋಡಬಹುದಾಗಿದೆ.

~*~*~*~*~

## ಅಧ್ಯಾಯ – ೫

# ಕಾದಂಬರಿಯ ಕಥಾವಸ್ತು

ಒಂದು ಕಾದಂಬರಿಯ ಮುಖ್ಯ ಕೇಂದ್ರವಸ್ತು. ಸಾಹಿತಿಯಾದವನು ಯಾವುದಾದರೂ ವಸ್ತುವನ್ನು ಆಯ್ಕೆ ಮಾಡಿಕೊಳ್ಳಲಿ, ವಸ್ತು ನಿರ್ವಹಣೆ ಮುಖ್ಯವಾಗಿರುತ್ತದೆ. ಕೃತಿಯಲ್ಲಿ ವಸ್ತುವಿನ ರಚನೆ, ಸನ್ನಿವೇಶ, ಸಂಭಾಷಣೆ, ವಸ್ತುವಿನ ಸಾಫಲ್ಯ ಕಡೆಗೆ ಕೃತಿಕಾರ ಗಮನಹರಿಸಬೇಕಾಗುತ್ತದೆ. ಈ ಅಂಶಗಳನ್ನು ಕೃತಿಕಾರ ಸಮರ್ಥವಾಗಿ ಬಳಸಿಕೊಂಡಿದ್ದರೆ ಮಾತ್ರ ಉದ್ದೇಶಿತ ಗುರಿ ಮುಟ್ಟಲು ಸಾಧ್ಯವಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ವಸ್ತು ಐತಿಹಾಸಿಕ ವ್ಯಕ್ತಿಯನ್ನು ಒಳಗೊಂಡಿದ್ದು, ಈಗಾಗಲೇ ಜನ ಮಾನಸದಲ್ಲಿ ಇಂತಹ ಐತಿಹಾಸಿಕ ವ್ಯಕ್ತಿಗಳ ಬಗ್ಗೆ ಒಂದು ನಂಬಿಕೆ, ಭಾವನೆಗಳು ಬೆಳೆದಿರುತ್ತದೆ. ಆದ್ದರಿಂದ ಸಾಹಿತಿಯಾದವನು ಇದರ ಬಗ್ಗೆ ಗಮನಹರಿಸಬೇಕಾಗುತ್ತದೆ. ಸಾಹಿತಿಯಾದವನಿಗೆ ಕಥಾವಸ್ತುವಿನಲ್ಲಿ ಮಾರ್ಪಾಡುಗಳನ್ನು ತರುವ ಸ್ವಾತಂತ್ರ್ಯವಿರುತ್ತದೆ. ಆದರೆ ಆ ಮಾರ್ಪಾಡುಗಳು ಮೂಲಕ್ಕೆ ಅಪಚಾರ ಮಾಡುವಂತಿರಬಾರದು. ಮೂಲದ ಉದ್ದೇಶಕ್ಕೆ ಪೂರಕವಾಗಿರಬೇಕಾಗುತ್ತದೆ. ಈ ಅಧ್ಯಾಯದಲ್ಲಿ 'ಗಿರಿಯ ನವಿಲು', ' ಕದಳಿಯ ಕರ್ಪೂರ' ಮತ್ತು 'ತರಂಗಿಣಿ' ಕಾದಂಬರಿಗಳ ಕಥಾವಸ್ತುವಿನ ಒಂದು ಕಿರುಪರಿಚಯವನ್ನು ಮಾಡಿಕೊಡಲಾಗುತ್ತದೆ.

## ಗಿರಿಯ ನವಿಲು

**ಕಥೆಯ ಸಾರ :** ಈ ಕಾದಂಬರಿಯು ಇನ್ನೂರು ಪುಟಗಳಿಂದ ಕೂಡಿದೆ. ಈ ಕಾದಂಬರಿಯಲ್ಲಿ ಶಿವಭಕ್ತರಾದ ನಿರ್ಮಲಶೆಟ್ಟಿ ಮತ್ತು ಸುಮತಿಯರಿಗೆ ಬಹುಕಾಲದಿಂದ ಮಕ್ಕಳಿರುವುದಿಲ್ಲ. ಅಪರೂಪದ ಶಿಶುವಾಗಿ ಅಕ್ಕ ಜನಿಸುತ್ತಾಳೆ. ತಾಯಿ ತಂದೆಯ ವಾತ್ಸಲ್ಯದಲ್ಲಿ ಬೆಳೆದ ಈ ಬಾಲಿಕೆಯ ಅಧ್ಯಾತ್ಮದಲ್ಲಿನ ಶ್ರದ್ಧೆಯನ್ನು ಗುರುತಿಸಿ, ಅವಳ ಗುರುಗಳಾದ ಚಂದಿಮ ದೇವರು ಅಧ್ಯಾತ್ಮ ಜ್ಞಾನವನ್ನು ನೀಡುತ್ತಾರೆ. ಮಹಾದೇವಿಯನ್ನು ಸಂಪೂರ್ಣವಾಗಿ ಆಧ್ಯಾತ್ಮಿಕ ಜೀವನಕ್ಕೆ ಅರ್ಪಿತಳಾಗಿ ಮಾಡುವ ಇನ್ನೊಂದು ಪ್ರಮುಖ ಘಟನೆ. ಕೌಶಿಕನ ಮದುವೆ. ಅಕ್ಕನ ಮುಗ್ಧ ಸೌಂದರ್ಯಕ್ಕೆ ಮೋಹಿತನಾದ ಕೌಶಿಕ ಆಕೆಯ ಮೂರು ಷರತ್ತುಗಳನ್ನು ಒಪ್ಪಿಕೊಂಡು ಮದುವೆಯಾಗುತ್ತಾನೆ. ಆದರೆ ದಿನಗಳೆದಂತೆ ಅಕ್ಕನಿಗೆ ದಾಂಪತ್ಯದಲ್ಲಿ ತೀವ್ರ ಜುಗುಪ್ಸೆ ಉಂಟಾಗುತ್ತದೆ. ಕೌಶಿಕ ಅಕ್ಕನಿಗೆ ಕೊಟ್ಟ ಎರಡು

ಷರತ್ತುಗಳನ್ನು ಮುರಿಯುತ್ತಾನೆ. ಜೊತೆಗೆ ಹೆಂಡತಿಯ ಚಾರಿತ್ರ್ಯದ ಬಗ್ಗೆ ಶಂಕಿಸುತ್ತಾನೆ. ಒಂದು ಸಲ ಅರಮನೆಗೆ ಆಗಮಿಸಿದ ಗುರುಗಳನ್ನು ನೋಡಲು ಅರೆ ನಗ್ನಳಾಗಿ ಅಕ್ಕ ಓಡಿ ಬರುತ್ತಾಳೆ. ಕೌಶಿಕ ಅವಳ ಮೈಮೇಲೆ ಇದ್ದ ಸೀರೆಯನ್ನು ಸೆಳೆದು ವಿವಸ್ತ್ರಳನ್ನಾಗಿ ಮಾಡುತ್ತಾನೆ. ಅಂದೇ ಅರಮನೆಯನ್ನು ತ್ಯಜಿಸಿ, ಗುರುಗಳೊಂದಿಗೆ ಶ್ರೀಶೈಲದತ್ತ ಪಯಣ ಬೆಳೆಸುತ್ತಾಳೆ. ಮಾರ್ಗದಲ್ಲಿ ಬಸವ, ಅಲ್ಲಮರು ರಚಿಸಿದ ಅನುಭವ ಮಂಟಪಕ್ಕೆ ಬರುತ್ತಾಳೆ. ಆನಂತರ ಅಲ್ಲಿಂದ ತನ್ನ ಇಷ್ಟದೈವವಾದ ಮಲ್ಲಿಕಾರ್ಜುನನು ನೆಲೆಸಿದ ಶ್ರೀಶೈಲದತ್ತ ಪಯಣ ಬೆಳೆಸುತ್ತಾಳೆ. ಅಲ್ಲಿ ತನ್ನ ಸಾಧನೆ, ದೈವಭಕ್ತಿಯಲ್ಲಿ ತೊಡಗುತ್ತಾಳೆ. ಅಲ್ಲದೆ ಕೌಶಿಕ ಬಂದು ಅವಳನ್ನು ಮನವೊಲಿಸಿ ತನ್ನ ರಾಜ್ಯಕ್ಕೆ ಕರೆದೊಯ್ಯಲು ಬರುತ್ತಾನೆ. ಆದರೆ ಅದು ವಿಫಲವಾಗುತ್ತದೆ. ಅಕ್ಕ ಕದಳಿಯನ್ನು ಹೊಕ್ಕು ಯೋಗ ಸಮಾಧಿಯಲ್ಲಿ ತೊಡಗುತ್ತಾಳೆ.

ವಿಮರ್ಶೆಯ ನೋಟ: ಈ ಕೃತಿಯ ವಸ್ತು ಅಕ್ಕನ ಜೀವನ. ಈಕೆ ಐತಿಹಾಸಿಕ ವ್ಯಕ್ತಿ ಎಂಬುದು ತಿಳಿದ ವಿಷಯ. ಇಂತಹ ವಸ್ತುವನ್ನು ಆರಿಸಿಕೊಂಡ ಕಟ್ಟೀಮನಿಯವರು ಆ ವಸ್ತುವಿನ ನಿರ್ವಹಣೆಯನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆ. ಕಾದಂಬರಿಕಾರರು ಹರಿಹರನ 'ಉಡುತಡಿಯ ಮಹಾದೇವಿ' ರಗಳೆಯಿಂದ ಪ್ರಭಾವಿತರಾಗಿದ್ದಾರೆ. ಆದರೆ ಹರಿಹರನಂತೆ ಅಕ್ಕನನ್ನು ಅಲೌಕಿಕ ನೆಲೆಯಲ್ಲಿ ಚಿತ್ರಿಸಿಲ್ಲ. ನಿರ್ಮಲ ಶೆಟ್ಟಿ ಮತ್ತು ಸುಮತಿಯರು ಮಲ್ಲಿಕಾರ್ಜುನನ ಪರಮ ಭಕ್ತರು. ಇದರಿಂದ ಸಹಜವೆಂಬಂತೆ ಅಕ್ಕನಿಗೆ ಆ ದೇವರ ಬಗ್ಗೆ ವಿಶೇಷವಾದ ಭಕ್ತಿ ಬೆಳೆಯಲು ಕಾರಣವಾಯಿತು. ಈ ನಿಲುವಿನಿಂದಲೇ ಕಾದಂಬರಿಯನ್ನು ಮುನ್ನಡೆಸುತ್ತಾರೆ. ನಿರ್ಮಲನೇ ಅಕ್ಕನ ಮೊದಲ ಗುರು. ಚಂದಿಮದೇವ ಅಕ್ಕನ ಬದುಕಿನ ದಾರಿ ತೋರಿದ ಗುರುವಾಗಿ ಬಂದರೆ, ಗುರುಲಿಂಗದೇವರು ವಿದ್ಯೆ ಕಲಿಸಿದ ಗುರುಗಳು ಎನ್ನುತ್ತಾರೆ ಕಾದಂಬರಿಕಾರರು. ಹೀಗೆ ಮೂವರು ಗುರುಗಳಿಂದ ಶಿಕ್ಷಿತಳಾದವಳು / ವಿದ್ಯೆಯನ್ನು ಕಲಿತವಳು ಅಕ್ಕ.

ಅಕ್ಕನ ಹುಟ್ಟು ಬಾಲ್ಯ, ಮದುವೆ ಆಧ್ಯಾತ್ಮಿಕ ಜೀವನವನ್ನು ಚಿತ್ರಿಸಿದ ಕಾದಂಬರಿಕಾರರು ಅವಳು ಹೇಗೆ ಹಂತ ಹಂತವಾಗಿ ವಿರಕ್ತಿ, ಆಧ್ಯಾತ್ಮಿಕ ಶಕ್ತಿಗಳನ್ನು ಹೊಂದಿ, ಮಹೋನ್ನತ ವ್ಯಕ್ತಿಯಾದಳು ಎಂದು ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಈ ನಡುವಿನಲ್ಲೇ ಅಂದಿನ ಸಮಾಜದ ಕೆಲವು ವಾಸ್ತವಾಂಶಗಳ ಮೇಲೆ ಬೆಳಕು ಚೆಲ್ಲುತ್ತಾರೆ. ಎರಡು ಧರ್ಮಗಳ ಸಂಘರ್ಷ ಹೇಗೆ ನಡೆಯುತ್ತಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ.

ಕಾದಂಬರಿ 'ಮುರಾರಿ' ವೈಷ್ಣವ ಧರ್ಮದ ಮಂತ್ರಿ ಕ್ಷತ್ರಿಯನಾದ ರಾಜ. ವೀರಶೈವ ಧರ್ಮದ ಅಕ್ಕ ಇವರುಗಳ ಮನೋಧರ್ಮ. ಅಕ್ಕ ವೀರಶೈವ ಧರ್ಮದ ಪ್ರತಿನಿಧಿಯಾದರೆ ಮಂತ್ರಿ ಮತ್ತು ರಾಜ ಆ ಧರ್ಮವನ್ನು ಮುರಿಯುವ ಪ್ರತಿರೋದಕ ಶಕ್ತಿಯಾಗಿ ನಿಲ್ಲುತ್ತಾರೆ. ಇದರ ಜೊತೆಗೆ ಜಂಗಮರೆಲ್ಲರನ್ನು ರಾಜ್ಯದಿಂದ ಹೊರ ಓಡಿಸುವ ಅಜ್ಞೆ. ಇವುಗಳನ್ನು ಕಾದಂಬರಿಕಾರರು ಕಾಲ್ಪನಿಕವಾಗಿ ಚಿತ್ರಿಸಿದ್ದರೂ ಅಂದಿನ ಸಮಾಜದ ವಾಸ್ತವ ಚಿತ್ರಣವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಈ ಕಾದಂಬರಿಯ ಕೇಂದ್ರ ಬಿಂದು ಅಕ್ಕ. ಈಕೆ ಮುಗ್ದ ಸೌಂದರ್ಯದ ರೂಪಸಿ. ರಾಜನ ದರ್ಪದ ಬಗ್ಗೆ ಕಾಮುಕತೆಯ ಬಗ್ಗೆ ಪ್ರಶ್ನಿಸುವ ಅಕ್ಕನ ದಿಟ್ಟತನವನ್ನು ಮೆಚ್ಚಲೇ ಬೇಕು. ರಾಜತ್ವವನ್ನು ವಿಮರ್ಶಿಸುವ ಸ್ಥೈರ್ಯ ಗುಣವನ್ನು ಕಾದಂಬರಿಕಾರರು ಸಹಜವೆಂಬಂತೆ ಚಿತ್ರಿಸಿದ್ದಾರೆ. ಅಕ್ಕ ಸ್ವಾಭಿಮಾನದ ಪ್ರತೀಕ. ಎಲ್ಲವನ್ನು ಪ್ರಶ್ನಿಸುವ ಎದೆಗಾರಿಕೆ ಅವಳಲ್ಲಿತ್ತು. ಹೆಣ್ಣಿಗೂ ಸ್ವತಂತ್ರವಿರುತ್ತದೆ,. ಅವಳಿಗೂ ಭಾವನೆಗಳಿರುತ್ತದೆ. ರಾಜನಾದರೂ ಸರಿಯೇ ಅದಕ್ಕೆ ಬೆಲೆಕೊಡಲೇಬೇಕು. ಹೆಣ್ಣು ಕೇವಲ ಭೋಗದ ವಸ್ತುವಲ್ಲ. ಜೀವದ  ಬೊಂಬೆಯಲ್ಲ. ಹೆಣ್ಣಿನ ಹಕ್ಕು ಮತ್ತು ವ್ಯಕ್ತಿತ್ವದ ಪ್ರತಿಬಿಂಬ. ಅಕ್ಕ ಎಂಬಂತೆ ಕಟ್ಟೀಮನಿಯವರು ನಿರೂಪಿಸಿ, ಒಂದು ಸಮಾಜ ವ್ಯವಸ್ಥೆಯ ಪ್ರತಿಭಟನೆಯ ನೇತಾರಳಾಗಿ ಚಿತ್ರಿಸಿದ್ದಾರೆ.

ಕಟ್ಟೀಮನಿಯವರು ಅಕ್ಕನ ಮದುವೆ ನಡೆಸಿದ್ದ ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಎಂದು ಚಿತ್ರಿಸುವುದರ ಜೊತೆಗೆ ಕಾದಂಬರಿಕಾರರು ವೀರಶೈವಧರ್ಮದ ಉದ್ಧಾರಕ್ಕಾಗಿ ಸಮಾಜದ ಹಿತಕ್ಕಾಗಿ ಅಕೆ ಮದುವೆಯಾದಳು. ಆಕೆಯ ಮದುವೆಯಲ್ಲಿ ಅಂದಿನ ಸಮಾಜದ ಒಳಿತಿತ್ತು. ಮದುವೆಯಾಗದಿದ್ದರೆ ವೀರಶೈವ ಧರ್ಮಕ್ಕೆ ಆ ರಾಜ್ಯದಲ್ಲಿ ಸಾಧ್ಯವಿರಲಿಲ್ಲ. ಮದುವೆ ಅವಳಿಗೆ ಅನಿವಾರ್ಯವಾಯಿತು ಎಂದು ಹೇಳುವುದರ ಮೂಲಕ ಇದು ಅಂದಿನ ಇತಿಹಾಸ ಘಟನೆಯ ವಾಸ್ತವಿಕ ಅಂಶವಾಗಿದೆ.

ಇನ್ನು ಉಳಿದಂತೆ ಕಾದಂಬರಿಯಲ್ಲಿ ಬರುವ ಸಂಭಾಷಣೆಗಳು ಸೊಗಸಾಗಿದೆ. ಕಮಲಾಂಬಿಕೆ ಎಂಬ ಗೆಳತಿಯ ಪಾತ್ರ ಕಾಲ್ಪನಿಕವಾದರೂ ಕೂಡ ಅಕ್ಕನ ಅಲೌಕಿಕ ದೃಷ್ಟಿಕೋನ, ಕಮಲಳ ಲೌಕಿಕತೆಯ ದೃಷ್ಟಿಕೋನಗಳ ವೈರುದ್ಯವನ್ನು ತಂದಿದ್ದಾರೆ. ಈ ಪಾತ್ರ ಅಕ್ಕನ ಪಾತ್ರಕ್ಕೆ ಹೊಳಪನ್ನು ತಂದುಕೊಡುವುದರ ಜೊತೆಗೆ ಪೂರಕವಾಗುವಂತೆ ಮೂಡಿ ಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಇದೊಂದು ಶ್ರೇಷ್ಠ ಕೃತಿಯಾಗಿದೆ. ಕೆಲವು ಲೋಪದೋಷಗಳು ಇದ್ದರೂ ಅದು ಗುಣಗಳ ನಡುವೆ ಮರೆಯಾಗಿದೆ. ಅಕ್ಕನ ವೈರಾಗ್ಯವನ್ನು ಸಹಜವೆಂಬಂತೆ ಚಿತ್ರಿಸಿದ್ದಾರೆ.

ಈ ಕಾದಂಬರಿಯ ಮುಖ್ಯ ಪಾತ್ರದಲ್ಲಿ ಅಕ್ಕನನ್ನು ಹೊರತುಪಡಿಸಿದರೆ, ಆನಂತರದ ಪಾತ್ರ ಕೌಶಿಕ. ಈತ ರಾಜ ಆದರೆ ರಾಜನಿಗೆ ಇರಬೇಕಾದ ಸಂಯಮ, ರಾಜನೀತಿ, ಪ್ರಜೆಗಳ ಹಿತ, ಅವರ ರಕ್ಷಣೆಯ ಹೊಣೆ ಈ ಯಾವುವು ಇಲ್ಲದ ಬೇಜವಾಬ್ದಾರಿ ವ್ಯಕ್ತಿ, ದರ್ಪ, ಅಹಂಕಾರ, ಮುಂಗೋಪಗಳ ಸಂಮಿಶ್ರಣವೇ ಕೌಶಿಕರಾಜ. ತನ್ನ ಅಧಿಕಾರ ಬಲದಿಂದ, ರೂಪದಿಂದ ಎಂತಹದ್ದನ್ನಾದರೂ ವಶಪಡಿಸಿಕೊಳ್ಳಬಹುದೆಂಬ ಮನೋಭಾವದವನು. ಕಾದಂಬರಿಯ ಕೊನೆಯವರೆವಿಗೂ ಕಾಮುಕನಾಗಿ, ದುಷ್ಟರಾಜನಾಗಿಯೇ ಉಳಿಯುತ್ತಾನೆ. ಈ ರೀತಿಯಾಗಿಯೇ ಕಾದಂಬರಿಕಾರರು ಅವನನ್ನು ಚಿತ್ರಿಸುತ್ತಾರೆ. ಆದರೆ ಇದು ಎಷ್ಟು ಸಮಂಜಸವೋ ತಿಳಿಯದು. ಇದಕ್ಕೆ ಐತಿಹಾಸಿಕ ದಾಖಲೆಗಳಿಲ್ಲಿ ವೀರಶೈವಧರ್ಮದ ಮಹೋನ್ನತ ವ್ಯಕ್ತಿಯ ಚಿತ್ರಣವನ್ನು ಕಾದಂಬರಿ ಒಳಗೊಂಡಿದ್ದರೂ, ಆ ಧರ್ಮದ ಲೋಪದೋಷಗಳ ಬಗ್ಗೆಯೂ ಪ್ರಸ್ತಾಪ ಎತ್ತಿರುವುದು ಕಟ್ಟೀಮನಿಯವರ ಮನೋಧರ್ಮವನ್ನು ಬಿಂಬಿಸುತ್ತದೆ. 'ಜಂಗಮರ' ಬಗ್ಗೆ ಕೌಶಿಕ ಮತ್ತು ಮುರಾರಿ ಹೇಳುವ ಮಾತುಗಳು ಕಾದಂಬರಿಕಾರರ ಮನದ ಮಾತುಗಳಾಗಿವೆ ಎನಿಸುತ್ತದೆ. ಜಂಗಮರು ಎನ್ನುವ ಹೆಸರಿನಲ್ಲಿ ದುಡಿಯುವ ವರ್ಗ ಸೋಮಾರಿತನವನ್ನು ಮೈಗೂಡಿಸಿಕೊಳ್ಳುತ್ತಿದೆ ಮತ್ತು ಬಸವಣ್ಣನ ನಿಲುವನ್ನು ಯಾವ ರೀತಿ ದುರುಪಯೋಗಪಡಿಸಿಕೊಳ್ಳುತ್ತಿದ್ದರೆನ್ನುವುದಕ್ಕೆ ಇದು ಸಾಕ್ಷಿಯಾಗಿದೆ.

## ಕದಳಿಯ ಕರ್ಪೂರ

ಶಿವಶರಣೆ ಅಕ್ಕನನ್ನು ಕುರಿತ ಈ ಕಾದಂಬರಿಯು ಮುನ್ನೂರು ಪುಟಗಳಿಂದ ಕೂಡಿದ್ದು, ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯ 'ಬೆಳೆಯುವ ಬೆಳಕು' ಇದರಲ್ಲಿ ಅಕ್ಕನ ಬಾಲ್ಯ, ಯೌವ್ವನಗಳ ಚಿತ್ರಣವನ್ನು ನೀಡಿದರೆ, ಎರಡನೆಯ ಅಧ್ಯಾಯವಾದ 'ದಿಗಂಬರದ ತಪೋಯಾತ್ರೆ' ಇದು ಅಕ್ಕ ಉಡುತಡಿಯಿಂದ ಕಲ್ಯಾಣಕ್ಕೆ ಪಯಣ, ಅಲ್ಲಿ ಅಲ್ಲಮಪ್ರಭು, ಬಸವಾದಿ ಪ್ರಮಥ ಭೇಟಿಯನ್ನು ಚಿತ್ರಿಸಲಾಗಿದೆ. ಕೊನೆಯ ಅಧ್ಯಾಯ 'ಕಲ್ಯಾಣದಿಂದ ಕದಳಿಗೆ' ಅಕ್ಕನ ಜೀವನದ ಕೊನೆಯ ಯಾತ್ರೆಯ ಚಿತ್ರಣವನ್ನು ಕೊಡುತ್ತಾರೆ.

ಚನ್ನಮಲ್ಲಿಕಾರ್ಜುನನ ಪರಮ ಭಕ್ತೆ ಅಕ್ಕ. ಆತನನ್ನು ಮದುವೆಯಾಗಬೇಕೆಂದು ಬಯಸುತ್ತಾಳೆ. ಆದರೆ ಊರಿನ ರಾಜನಾದ ಕೌಶಿಕ ಈಕೆಯನ್ನು ಮದುವೆಯಾಗ ಬಯಸುತ್ತಾನೆ. ಆತನ ಬಲತ್ಕಾರಕ್ಕೆ ಮಣಿದು ತಂದೆ-ತಾಯಿಗೆ ರಾಜನಿಂದ ತೊಂದರೆಯಾಗಬಾರದೆಂದು ಬಯಸಿ ತನ್ನ ಜೀವನ ನಿರ್ಧಾರವನ್ನು ತಾನೇ ಕೈಗೊಂಡು, ಕೆಲವು ಷರತ್ತುಗಳ ಮೇಲೆ ಅರಮನೆಗೆ ಬರುತ್ತಾಳೆ. ಈ ಷರತ್ತುಗಳನ್ನು ರಾಜ ಮುರಿದಾಗ ಅವನನ್ನು ತ್ಯಜಿಸಿ ದಿಗಂಬರೆಯಾಗಿ ಹೋಗುತ್ತಾಳೆ. ಚನ್ನಮಲ್ಲಿಕಾರ್ಜುನನನ್ನು ಸೇರಲು ಕದಳಿಯತ್ತ ಪಯಣಿಸುತ್ತಾಳೆ. ಮಾರ್ಗ ಮಧ್ಯದಲ್ಲಿ ಕಲ್ಯಾಣಕ್ಕೆ ಬಂದು ಅಲ್ಲಿ ಕೆಲ ಕಾಲ ಇದ್ದು ಬಸವ, ಅಲ್ಲಮ ಸಿದ್ಧರಾಮ ಮುಂತಾದವರ ಸಂಗದಲ್ಲಿ ಪರಿಪಕ್ವಗೊಂಡು ಅಲ್ಲಿಂದ ಶ್ರೀಶೈಲಕ್ಕೆ ಪಯಣಿಸುತ್ತಾಳೆ. ಕದಳಿಯವನದಲ್ಲಿ ಐಕ್ಯವಾಗುತ್ತಾಳೆ. ಅಲ್ಲಿಯೇ ಕರ್ಪೂರದಂತೆ ಕರಗಿಹೋಗುತ್ತಾಳೆ.

**ವಿಮರ್ಶೆಯ ನೋಟ** : ಈ ಕಾದಂಬರಿಕಾರರು ಪ್ರಸ್ತಾವನೆಯಲ್ಲಿಯೇ 'ಈ ಜಗತ್ತೆಂಬ ಕದಳಿಯಲ್ಲಿ ಅದೊಂದು ಪರಿಮಳಭರಿತ ಕರ್ಪೂರದ ಪರಂಜ್ಯೋತಿ ಅದಕ್ಕೆ ಸಂಕೇತವೋ ಎಂಬಂತೆ ಅವಳ ಜೀವನ ಘಟನೆಗಳು ಬೆಳೆಯುತ್ತವೆ. ಅವಳ ವೈರಾಗ್ಯ ಪ್ರಭೆ ಹೊಳೆಯುತ್ತದೆ. ಕೊನೆಯಲ್ಲಿ ಉರಿಯುಂಡ ಕರ್ಪೂರದಂತೆ ತನ್ನ ಭೌತದೇಹವನ್ನು ಮೀರಿ ಬಯಲಾಗುವುದು ಕೂಡ, ಶ್ರೀಶೈಲದ ಕದಳಿಯ ವನದಲ್ಲಿ', ಎಂಬ ಮಾತಿನಂತೆಯೇ ಕಾದಂಬರಿಯನ್ನು ಚಿತ್ರಿಸಿದ್ದಾರೆ. ಅಕ್ಕನದು ದಿವ್ಯ ಜೀವನವೆಂದು ಕಾದಂಬರಿಕಾರರು ಭಾವಿಸಿಕೊಂಡಿದ್ದಾರೆ. ಅಕ್ಕ ತನ್ನ ಆಧ್ಯಾತ್ಮಿಕ ಬದುಕಿನುದ್ದಕ್ಕೂ ಬರೀ ಅಡ್ಡಿ ಆತಂಕಗಳನ್ನು ಎದುರಿಸಬೇಕಾಗುತ್ತದೆ. ಕೌಶಿಕರಾಜನಿಂದ, ಜನಸಾಮಾನ್ಯರಿಂದ, ಬಂಧು ಬಾಂಧವರಿಂದ ಹೀಗೆ ಎಲ್ಲರಿಂದಲೂ ತೊಡಕುಗಳೇ. ಗುರುಲಿಂಗದೇವರು ಮತ್ತು ಅಕ್ಕನ ಸಂವಾದ, ಅಲ್ಲಮ ಮತ್ತು ಅಕ್ಕನ ಸಂಭಾಷಣೆ ಮನೋಜ್ಞವಾಗಿದೆ. ಅಕ್ಕನ ಮದುವೆಯ ವಿಷಯವಾಗಿ ಸಾಮಾನ್ಯ ಜನರು ನಿಂದಿಸುವ ಪರಿ, ಅಕ್ಕನ ಅಂತರಂಗದ ತಳಮಳಗಳನ್ನು ಸೊಗಸಾಗಿ ಚಿತ್ರಿಸಿದ್ದಾನೆ.

ಒಂದು ಸಾಹಿತ್ಯ ಕೃತಿಯು ಕೆಲವೊಮ್ಮೆ ಕಾಲ್ಪನಿಕ ಸನ್ನಿವೇಶಗಳನ್ನು ಒಳಗೊಂಡಿರುತ್ತದೆ. ಇದು ಕಲಾತ್ಮಕತೆ ನಿದರ್ಶನವಾದರೂ ಅವುಗಳನ್ನು ಸಹಜವೆಂದು ರೂಪಿಸಿರುವುದು ಕಾದಂಬರಿಕಾರರ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಒಂದು ಹೆಣ್ಣು ಈವತ್ತಿನ

ಸಮಾಜದಲ್ಲೇ ಒಂಟಿಯಾಗಿ ಬದುಕುವುದು ದುಸ್ತರ. ಇನ್ನು ೧೨ನೇ ಶತಮಾನದಲ್ಲಿ ದಿಟ್ಟತನದಿಂದ ಅಂದಿನ ಸಮಾಜದ ನಿಲುವುಗಳಿಗೆ ವಿರುದ್ಧವಾಗಿ ಹೊರಟವಳು ಅಕ್ಕ.

ಅಂದಿನ ದಿನದಲ್ಲಿ ಅಕ್ಕ ಎದುರಿಸಬಹುದಾದ ಕಷ್ಟಗಳು ಏನಿರಬಹುದು ಎಂಬುದನ್ನು ಕಾಲ್ಪನಿಕವಾಗಿ ಸೃಷ್ಟಿಸಿದರೂ ಅದು ಸತ್ಯಕ್ಕೆ ಹತ್ತಿರವಿರುವಂತೆ ನೈಜವಾಗಿ ಮೂಡಿದೆ. ಹರಿಹರ ಈಕೆಯನ್ನು ಕಾರಣಿಕ ಸ್ತ್ರೀ, ದೈವಾಂಶ ಸಂಭೂತೆ ಎನ್ನುವ ಭಾವದಲ್ಲಿ ಚಿತ್ರಿಸಿದ್ದಾನೆ. ಆದರೆ ಕಾದಂಬರಿಕಾರರು ಆಕೆ ನಮ್ಮ ನಿಮ್ಮಂತೆ ಸಾಮಾನ್ಯ ಹೆಣ್ಣುಮಗಳು, ಅವಳಿಗೂ ಆಸೆ, ಆಮಿಷಗಳಿತ್ತು. ಆದರೆ ಅದೆಲ್ಲವನ್ನು ಮೆಟ್ಟಿನಿಂತಳು) ಉದಾಹರಣೆಗೆ ಹೇಳುವುದಾದರೆ ಕೌಶಿಕನ ಬಗ್ಗೆ ಒಂದು ಕ್ಷಣ ಮನಸ್ಸು ಜಾರಿದರೂ ಅದನ್ನು ಆತ್ಮದ ಉದ್ಧಾರ ಕಡೆಗೆ ತಿರುಗಿಸುವ ಪರಿ ಸೊಗಸಾಗಿದೆ. ಆದ್ದರಿಂದಲೇ ವಿಜಯದಬ್ಬೆಯವರು ಅಕ್ಕನ ವೈರಾಗ್ಯವನ್ನು ಕುರಿತು 'ಆಕೆಯದು ಸಿದ್ಧಿಸಿದ ವೈರಾಗ್ಯವಲ್ಲ. ಸಿದ್ಧಿಸಿಕೊಂಡ ವೈರಾಗ್ಯ' ಹೇಳಿರುವ ರೀತಿ ಸಮಂಜಸವಾಗಿದೆ. ಏಕೆಂದರೆ ಯಾವ ಭೋಗ ಭಾಗ್ಯಗಳು ಇಲ್ಲದಾಗ ವಿರಕ್ತವಾಗಿ ಸಂನ್ಯಾಸಿನಿಯಾಗಿ ಬದುಕಬಹುದು. ಎಲ್ಲಾ ಸಕಲೈಶ್ವರ್ಯಗಳಿದ್ದಾಗ್ಯೂ ಅದೆಲ್ಲವನ್ನು ತಿರಸ್ಕರಿಸಿ, ಮೆಟ್ಟಿನಿಲ್ಲುವುದು ಅಕ್ಕನಂತಹ ವೀರವಿರಾಗಿಣಿಗೆ ಮಾತ್ರ ಸಾಧ್ಯವಾಗುವ ಸಂಗತಿ ಎಂಬುದನ್ನು ಕಾದಂಬರಿಕಾರರು ತೋರಿಸಿರುವ ಪರಿ ಶ್ಲಾಘನೀಯ.

ಈ ಕಾದಂಬರಿಯಲ್ಲಿ ಪ್ರಸ್ತಾಪಿಸಲೇಬೇಕಾದ ವ್ಯಕ್ತಿ ಕೌಶಿಕ. ಈ ಪಾತ್ರವನ್ನು ಕಾದಂಬರಿಕಾರರು ಉದಾತ್ತೀಕರಿಸಲು ಪ್ರಯತ್ನಿಸಿದ್ದಾರೆ. ಅಕ್ಕನ ಜ್ಞಾನ ಅಲೌಕಿಕವಾದುದು. ಆದರೆ ಕೌಶಿಕ ಮಹಾರಾಜನದು ಅಲೌಕಿಕ ಜ್ಞಾನ. ಆತ ಹಾಗೆ ನಡೆದುಕೊಳ್ಳುವುದರಲ್ಲಿ, ಆತನ ದೃಷ್ಟಿಯಲ್ಲಿ ತಪ್ಪಿಲ್ಲ. ರಾಜನಿಗೆ ಏನೆಲ್ಲಾ ಅಧಿಕಾರವಿದ್ದರೂ ಆತನ ವರ್ತನೆ ಮಿತಿಮೀರಿಲ್ಲ. ಮಾನವ ಸಹಜ ಆಸೆ, ಆಮಿಷಗಳಿಗೆ ಬಲಿಯಾಗಿದ್ದಾನಷ್ಟೆ. ಆತನ ಬಗ್ಗೆ ಸಹೃದಯರಲ್ಲಿ ಒಳ್ಳೆಯ ಭಾವನೆ ಮೂಡುವಂತೆ ಮಾಡಿದ್ದಾರೆ.

(ದಿಗಂಬರೆಯಾಗಿ ಅರಮನೆಯಿಂದ ಗುರುಲಿಂಗದೇವರನ್ನು ಕಾಣಲು ಹೋಗುವಾಗ ಜನರ ವರ್ತನೆಯ ಪರಿ, ಈ ಸಂದರ್ಭದಲ್ಲಿ ನಡೆಯುವ ಗುರುಶಿಷ್ಯೆಯ ಸಂವಾದ ಸೊಗಸಾಗಿ ಮೂಡಿಬಂದಿದೆ. ಅಕ್ಕನ ಬಗ್ಗೆ ಚಾರಿತ್ರಿಕವಾಗಿ ಚರ್ಚೆಯಲ್ಲಿರುವ ಶ್ವೇತಾಂಬರಿ–ದಿಗಂಬರಿ ಎಂಬ ವಿಷಯಕ್ಕೆ ಇವರ ಕಲ್ಪನೆ ಒಂದು ರೀತಿಯ ತಾತ್ಕಾಲಿಕ ತೆರೆಯನ್ನು ಎಳೆಯುವ ಪ್ರಯತ್ನವನ್ನು ಮಾಡಿದೆ.

ಕಾದಂಬರಿಕಾರರು ಐತಿಹಾಸಿಕ ವ್ಯಕ್ತಿಯೋರ್ವಳ ಬದುಕನ್ನು ವಸ್ತುವಾಗಿ ಕಾದಂಬರಿ ಒಳಗೊಂಡಿದೆ ಎಂಬುದನ್ನು ಮರೆತಿಲ್ಲ. ಹೆಜ್ಜೆ ಹೆಜ್ಜೆಗೂ ಸಂದರ್ಭ ಸನ್ನಿವೇಶಗಳ ನಿದರ್ಶನಕ್ಕೆ ವಚನಗಳನ್ನು ಸಮಯೋಚಿತವಾಗಿ ಬಳಸಿಕೊಂಡಿದ್ದಾರೆ. ಇದರಿಂದಾಗಿ ಕಾದಂಬರಿಯನ್ನು ಓದಿದ ತಕ್ಷಣ ಅಕ್ಕ ಬಹುಶಃ ಹೀಗೆಯೇ ಬದುಕಿದ್ದಾಳೇನೋ ಎಂಬ ವಾಸ್ತವತೆಯ ಚಿತ್ರವನ್ನು ಕಣ್ಣಮುಂದೆ ತರುತ್ತಾರೆ.

ಕದಳಿ ಕರ್ಪೂರ ಒಂದು ಶ್ರೇಷ್ಠ ಕೃತಿ. ಆದರೂ ಕೆಲವು ಮಿತಿಗಳಿಗೆ ಒಳಪಟ್ಟಿದೆ. ಕೌಶಿಕನನ್ನು ಉದಾತ್ತೀಕರಿಸಿದ ಕಾದಂಬರಿಕಾರರು, ಮತ್ತೆ ಅವನ ಮನಪರಿವರ್ತನೆಯಾಗಿ, ಆತನು ಅಕ್ಕನನ್ನು ಕದಳಿಯಲ್ಲಿ ಸಂಧಿಸಿ ಕ್ಷಮೆಯಾಚಿಸಿದ ಎನ್ನುವ ಸಂಗತಿಗೆ ಐತಿಹಾಸಿಕ ದಾಖಲೆಗಳಿಲ್ಲಿ, ಹಾಗೆಯೇ ಗುರುಲಿಂಗದೇವರ ಆದೇಶದ ಮೇರೆಗೆ ಸಂಗಮದೇವರು ಕಲ್ಯಾಣದವರೆಗೆ ಆಕೆಯ ರಕ್ಷಣೆಗಾಗಿ ಬಂದರೆಂಬುದಕ್ಕೂ ಯಾವುದೇ ನಿದರ್ಶನಗಳಿಲ್ಲ. ಈ ಮಿತಿಗಳಿದ್ದಾಗ್ಯೂ ಇದೊಂದು ಸುಂದರ ಕಾದಂಬರಿ. ಇಲ್ಲಿನ ಸನ್ನಿವೇಶ ಸಂಭಾಷಣೆಗಳು ಸೊಗಸಾಗಿ ಮೂಡಿಬಂದಿದೆ. ದೇಹದ ಮೇಲಿನ ವ್ಯಾಮೋಹ, ತಂದೆ ತಾಯಿಗಳ ವ್ಯಾಮೋಹ, ಗುರುಗಳ ವ್ಯಾಮೋಹ ಹೀಗೆ ಎಲ್ಲವನ್ನು ಹಂತ ಹಂತವಾಗಿ ತೊರೆದು ಅಕ್ಕ ಊರ್ಧ್ವಮುಖಿಯಾಗಿ ಚಲಿಸುವ ಪರಿ ಶ್ಲಾಘನೀಯ.

**ತರಂಗಿಣಿ :**

ಈ ಕಾದಂಬರಿಯ ಕರ್ತೃ ಮಾತೆ ಮಹಾದೇವಿಯವರು. ಈ ಕಾದಂಬರಿಯನ್ನು ಬೃಹತ್ ಗಾತ್ರದಲ್ಲಿ ರಚಿಸಿದ್ದಾರೆ. ಇದನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಂಡಿದೆ. ಅವುಗಳೆಂದರೆ ಪೂರ್ವಾರ್ಧ ಮತ್ತು ಉತ್ತರಾರ್ಧ. ಈ ವಿಭಾಗಗಳಲ್ಲಿ ಅನೇಕ ಅಧ್ಯಾಯಗಳಿಂದ ಕೂಡಿದೆ. ಪೂರ್ವಾರ್ಧದಲ್ಲಿ ಅಕ್ಕನ ಜೀವನವನ್ನು ಉಗಮ, ಪ್ರಕೃತಿ, ಗಮನ ಎಂಬ ಅಧ್ಯಾಯಗಳಲ್ಲಿ ಅಕ್ಕನ ಬಾಲ್ಯ ಯೌವ್ವನ, ವಿವಾಹ ಇವೇ ಮೊದಲಾದ ವಿವರಗಳನ್ನು ಕೊಟ್ಟಿದ್ದಾರೆ. ನಂತರ ಉತ್ತರಾರ್ಧದಲ್ಲಿ ಸಮಾಗಮ ಎಂಬ ಭಾಗಗಳಲ್ಲಿ ವೈರಾಗ್ಯ ಮತ್ತು ಐಕ್ಯವನ್ನು ತಿಳಿಸಿದ್ದಾರೆ. ಈ ವಿವರವನ್ನು ಸುಮಾರು ೮೯೩ ಪುಟಗಳಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ. ಇಂತಹ ಬೃಹತ್ ಗಾತ್ರದ ಕಾದಂಬರಿಯಲ್ಲಿ ಅಕ್ಕನ ಜೀವನವನ್ನು ವಿವರಿಸಲು ಹೊರಟ ಮಹಾದೇವಿಯರ ಯಶಸ್ವೀ ಪ್ರಯತ್ನವನ್ನು ಪ್ರಶಂಸೆ ಮಾಡಲೇಬೇಕು.

**ಕಥೆಯ ಸಾರ :**

ಈ ಕಾದಂಬರಿಯ ಕಥಾ ಸಾರಾಂಶದ ಕಿರು ನೋಟ ಇಲ್ಲಿದೆ,. ಕಾದಂಬರಿಯ ಆರಂಭಕ್ಕೆ ಬಹುಕಾಲದಿಂದ ಮಕ್ಕಳಿಲ್ಲದೆ ಪರಿತಪಿಸುವ ವಯಸ್ಕ ದಂಪತಿಗಳ ಚಿತ್ರಣ ಬರುತ್ತದೆ. ಇವರು ಮಕ್ಕಳಿಗಾಗಿ ಪರಿತಪಿಸುತ್ತಾ, ಕಂಡ ಕಂಡ ದೇವರಲ್ಲಿ ಹರಕೆಯನ್ನು ಹೊರುತ್ತಾರೆ. ಈ ದಂಪತಿಗಳ ಹೆಸರು ಓಂಕಾರಶೆಟ್ಟಿ ಮತ್ತು ಲಿಂಗಮ್ಮ. ಇವರ ವಾಸಸ್ಥಳ ಉಡುತಡಿ, ಇವರು ಪರಮ ಶಿವಭಕ್ತರು, ಹಾಗೆಯೇ ಗುರುಲಿಂಗದೇವರು ಇವರ ಮನೆತನದ ಗುರುಗಳು. ಇವರ ಕಷ್ಟಸುಖಗಳನ್ನು ಪರಿಹರಿಸುವ ಗುರುಗಳು ಕೂಡ ಆಗಿದ್ದರು. ಬಹುಕಾಲದವರೆಗೆ ಮಕ್ಕಳಿಲ್ಲ ಈ ದಂಪತಿಗಳ ನೋವನ್ನು ಇವರು ಅರಿತಿದ್ದರು. ಈ ದಂಪತಿಗಳಿಗೆ ಶಾರೀರಿಕ ದೋಷ ಯಾವುದೂ ಇಲ್ಲವೆಂಬುದು ಅವರಿಂದ ತಿಳಿದ ಗುರುಗಳು ಇವರಿಗಾಗಿ ಒಂದು ದೈವಸಂಕಲ್ಪ ಮಾಡುತ್ತಾನೆ. ಒಂದು ವ್ರತದ ನಿಯಮವನ್ನು ಹೇಳುತ್ತಾನೆ. ಮರುದಿನ ಸೂರ್ಯೋದಯಕ್ಕೆ ಮುಂಚೆ ದಂಪತಿಗಳು ಮಠಕ್ಕೆ ಬರುತ್ತಾರೆ. ಇಲ್ಲಿ ಇಷ್ಟಲಿಂಗದ ಮಹಿಮೆಯಿಂದ ಒಂದು ಬೆಳಕು ಹುಟ್ಟಿ, ಅದು ಕಲ್ಲು ಸಕ್ಕರೆಯಲ್ಲಿ ಲೀನವಾಗುತ್ತದೆ. ಆ ಕಲ್ಲುಸಕ್ಕರೆಯನ್ನು ಗುರುಗಳು ಲಿಂಗಮ್ಮನಿಗೆ ಕೊಡುತ್ತಾರೆ. ಇದನ್ನು ಸೇವಿಸಿದ ಲಿಂಗಮ್ಮನಿಗೆ ಆ ರಾತ್ರಿ ವಿಚಿತ್ರ ಕನಸ್ಸೊಂದು ಬೀಳುತ್ತದೆ. ಆ ಕನಸಿನಲ್ಲಿ ಶಿವನು ಮಗುವನ್ನು ಕರುಣಿಸಿದ ಹಾಗೆ, ಮತ್ತೆ ಆ ಮಗುವನ್ನು ತನಗೆ ಬೇಕೆಂದು ಕೇಳಿದಾಗೆ. ಆ ಮಗುವನ್ನು ಲಿಂಗಮ್ಮ ಶಿವನಿಗೆ ಅರ್ಪಿಸಿದ ರೀತಿಯಲ್ಲಿ ಬೀಳುತ್ತದೆ. ಇದನ್ನು ಗುರುಗಳಿಗೆ ವಿವರಿಸಿದಾಗ ಅವರು ಕಾರಣಿಕ ಕನ್ಯೆಯೊಬ್ಬಳ ಜನನವಾಗುತ್ತದೆಂದು ತಿಳಿಸುತ್ತಾರೆ.

ಓಂಕಾರಶೆಟ್ಟಿಯು ವ್ಯಾಪಾರಸ್ಥನಾದರೂ ಮೊದಲಿನಿಂದಲೂ ವೀರಶೈವ ಧರ್ಮದ ಬಗ್ಗೆ ಹಾಗೂ ಇತರ ಗ್ರಂಥಗಳ ಬಗ್ಗೆ ಆಳವಾದ ಅಧ್ಯಯನ ಮಾಡಿದ್ದನು. ಇವನಿಗೆ ಸನ್ಯಾಸಿಯಾಗಬೇಕೆಂಬ ಆಸೆ ಇರುತ್ತದೆ. ಆದರೆ ಅವನು ಹಿರಿಯರ ಒತ್ತಾಯಕ್ಕೆ ಮದುವೆಯಾಗಿರುತ್ತಾನೆ. ಲಿಂಗಮ್ಮನು ಗಂಡನ ಅಧ್ಯಯನಕ್ಕೆ ಆತನ ಇತರ ಕೆಲಸಕ್ಕೆ ಅಡ್ಡಿ ಬರುವ ಹೆಣ್ಣಾಗಿರುವುದಿಲ್ಲ. ಇಂತಹ ಅಪರೂಪದ ದಂಪತಿಗಳಿಗೆ ಅಕ್ಕನಂತಹ ಮಗಳು ಜನಿಸುತ್ತಾಳೆ. ಈ ಮಗುವಿಗೆ ಹನ್ನೊಂದನೆಯ ದಿನಕ್ಕೆ ಮರುಳಸಿದ್ದರು ಮತ್ತು ಗುರುಲಿಂಗರು ಬಂದು ನಾಮಕರಣ ಮಾಡಿದರು. ಈಕೆಗೆ 'ಮಹಾದೇವಿ' ಎಂದು ಹೆಸರನ್ನು ಇಡುತ್ತಾರೆ.

ಬಹುಸುಂದರವಾದ ಈ ಮಗುವಿನ ಬಾಲ ಚೇಷ್ಟೆಗಳನ್ನು ನೋಡುತ್ತಲೇ ಕಾಲಸರಿಯುತ್ತಾ ಹೋಗುತ್ತದೆ. ಅಪರೂಪದ ಮಗಳಾಗಿ ಹುಟ್ಟಿದ್ದರಿಂದ ಓಂಕಾರ ತನ್ನ ವ್ಯಾಪಾರ ವ್ಯವಹಾರಗಳನ್ನು ಮರೆತು ಯಾವಾಗಲು ಮಗುವಿನೊಡನೆ ಆಟವಾಡುತ್ತಾ ಕಾಲಕಳೆಯುತ್ತಾ, ಇದರಿಂದಾಗಿ ತಂದೆ ಮಗಳಲ್ಲಿ ಒಂದು ಅನ್ಯೂನ್ಯ ಸಂಬಂಧ ಬೆಳೆಯುತ್ತದೆ. ತನ್ನ ಮಗಳಿಗೆ ವಿದ್ಯೆಯನ್ನು ಕಲಿಸಬೇಕೆಂಬ ಆಸೆ ಓಂಕಾರನಿಗಾದರೆ, ಮಹಾದೇವಿಗೆ ತಾನು ಅಪ್ಪನ ರೀತಿಯಲ್ಲಿ ಓದಬೇಕೆಂಬ ತವಕ. ಇದರ ಫಲಾವಾಗಿ ಆಕೆಯನ್ನು ಮಠದ ಶಾಲೆಗೆ ಸೇರಿಸುತ್ತಾರೆ. ಅಕ್ಕನ ವಿದ್ಯಾಭ್ಯಾಸ ಸರಾಗವಾಗಿ ಸಾಗುತ್ತದೆ. ಪ್ರಚಂಡ ಬುದ್ದಿಶಕ್ತಿ ಅಧ್ಯಯನ, ತರ್ಕ, ವಿಮರ್ಶೆಯ ರೀತಿಯಲ್ಲಿ ಇವಳ ಓದು ಸಾಗುತ್ತದೆ. ಅಕ್ಕ ಬಾಲ್ಯದಲ್ಲಿಯೇ ಬಹಳ ದಿಟ್ಟ ಸ್ವಭಾವದವಳು. ತನಗೆ ಅನಿಸಿದ್ದನ್ನು ನೇರವಾಗಿ ಹೇಳುವ ಛಲವಾದಿ.) ಹೀಗೆ ಬೆಳೆದಂತಹ ಅಕ್ಕ ಯೌವ್ವನಕ್ಕೆ ಕಾಲಿಟ್ಟಾಗ, ಅತೀ ರೂಪ ಲಾವಣ್ಯವತಿಯಾದ ಅಕ್ಕನನ್ನು ಕೌಶಿಕ ಮೋಹಿಸುತ್ತಾನೆ. ಆದರೆ ಕೌಶಿಕನನ್ನು ಅಕ್ಕ ತಿರಸ್ಕರಿಸುತ್ತಾಳೆ. ತಾನು ವೀರ ವಿರಾಗಿಣಿಯಾಗಿಯೇ ಉಳಿಯುವ ತನ್ನ ನಿರ್ಧಾರವನ್ನು ವ್ಯಕ್ತಿಪಡಿಸುತ್ತಾಳೆ.) ಈ ಒಂದು ನಿರ್ಧಾರದಿಂದ ವಿಚಲಿತಳಾಗುವ ಪರಿಸ್ಥಿತಿಯು ಎದುರಾಗುತ್ತದೆ. ಆಗ ಮೂರು ಷರತ್ತುಗಳನ್ನು ಗುರುಗಳ ಮಾರ್ಗದರ್ಶನದ ಮೇರೆಗೆ ಕೌಶಿಕನಿಗೆ ತಿಳಿಸುತ್ತಾಳೆ. ಈ ನಿಯಮಗಳಿಗೆ ಒಪ್ಪಿದ ಮೇಲೆ ಕೌಶಿಕನ ಅರಮನೆಗೆ ಬರುತ್ತಾಳೆ. ಈ ನಿಯಮಗಳಿಗೆ ಬದ್ಧನಾದ ಕೌಶಿಕ ಆನಂತರ ಅವುಗಳನ್ನು ಮುರಿಯುತ್ತಾನೆ. ಇದರಿಂದ ಜಿಗುಪ್ಸೆಹೊಂದಿದ್ದ ಮಹಾದೇವಿಯು ಕೌಶಿಕನನ್ನು ತಿರಸ್ಕರಿಸಿ, ದಿಗಂಬರೆಯಾಗಿ ಅರಮನೆಯಿಂದ ಹೊರ ಬರುತ್ತಾಳೆ. ಆನಂತರ ಊರಿನಿಂದಲೇ ಹೊರಬಂದು ತನ್ನ ಅಧ್ಯಾತ್ಮ ಸಾಧನೆಗಾಗಿ ಶ್ರೀಶೈಲದತ್ತ ಸಾಗುತ್ತಾಳೆ. ಈ ಪಯಣದ ಹಾದಿಯಲ್ಲಿ ಅನೇಕ ಕಷ್ಟ ನಿಷ್ಠೂರಗಳನ್ನು ಎದರಿಸುತ್ತಾಳೆ. ಈ ನಿಷ್ಠೂರ, ಲೋಕ ಅಪವಾದಗಳನ್ನು ಸಹಿಸಿಕೊಂಡು ತನ್ನ ಪಯಣವನ್ನು ಮುಂದುವರೆಸುತ್ತಾಳೆ. ಈ ಹಾದಿ ಮಧ್ಯೆದಲ್ಲಿ ಕಲ್ಯಾಣವು ಎದುರಾಗುತ್ತದೆ. ಅಲ್ಲಿಯ ಶರಣ ಸಮುದಾಯದಲ್ಲಿ ಅಕ್ಕನು ಒಬ್ಬಳಾಗಿ ಕೆಲವು ಕಾಲ ಜೀವಿಸುತ್ತಾಳೆ. ತನ್ನ ವ್ಯಕ್ತಿತ್ವ, ಆದರ್ಶಗಳಿಂದ ಎಲ್ಲರ ಮನ್ನಣೆ ಗಳಿಸುತ್ತಾಳೆ. ಅಲ್ಲಿಯ ಬಸವ, ಸಿದ್ದರಾಮ, ಚೆನ್ನಬಸವಣ್ಣರ ಪ್ರೀತಿಗೆ ಪಾತ್ರಳಾಗುತ್ತಾಳೆ. ಇಲ್ಲಿಂದ ಹೊರಟ ಅಕ್ಕ ಪಯಣದ ಹಾದಿಯಲ್ಲಿ ಸಿಕ್ಕ ಊರುಗಳಲ್ಲಿ ನೀತಿ ಬೋಧನೆಯನ್ನು ಮಾಡುತ್ತಾ ಸಾಗುತ್ತಾಳೆ.

ಅಕ್ಕನ ಅಂತಿಮ ಘಟ್ಟ ಅದು ಶ್ರೈಶೈಲಕ್ಕೆ ತಲುಪಿ ಅಲ್ಲಿಂದ ಕದಳಿ ವನದತ್ತ ಸಾಗಿದ್ದು, ಅಲ್ಲಿ ಒಂದು ಪ್ರದೇಶವನ್ನು ಹುಡುಕಿ ಅಲ್ಲಿ ಧ್ಯಾನಾಸಕ್ತಳಾಗುತ್ತಾಳೆ. ಅಕ್ಕ ಶ್ರೀಶೈಲಕ್ಕೆ ಪ್ರವೇಶಿಸಿದಾಗಲೇ ಕೌಶಿಕ ಮತ್ತು ಶಿವಕಾಮಿಯರು ಇವರನ್ನು ಹುಡುಕಿಕೊಂಡು ಬರುತ್ತಾರೆ. ಇವರಿಗೆ ಜ್ಞಾನ ದೀಕ್ಷೆಯನ್ನು ಕೊಡುತ್ತಾಳೆ. ಒಂದು ದಿನ ಇವರಿಗೂ ತಿಳಿಸದಂತೆ ಕದಳಿಯತ್ತ ಮಾಯವಾಗುತ್ತಾಳೆ. ಕೊನೆಗೆ ಅಲ್ಲಿಯೇ ಐಕ್ಯಳಾಗುತ್ತಾಳೆಂದು ತಿಳಿಸುತ್ತಾರೆ.

**ವಿಮರ್ಶೆಯ ನೋಟ :**

ಈಗಾಗಲೇ ತಿಳಿಸಿದ್ದಂತೆ ಇದೊಂದು ಬೃಹತ್ ಕಾದಂಬರಿ. ಅಕ್ಕನ ಜೀವನವನ್ನು ಎಳೆ ಎಳೆಯಾಗಿ ವಿವರ ವಿವರವಾಗಿ ಚಿತ್ರಿಸಿದ್ದಾರೆ. ಪ್ರತಿಯೊಂದು ಸನ್ನಿವೇಶ ಪಾತ್ರಕ್ಕೂ ಹೆಚ್ಚಿನ ಮಹತ್ವವನ್ನು ಕೊಟ್ಟು ಜೀವ ತುಂಬಲು ಪ್ರಯತ್ನಿಸಿದ್ದಾರೆ. ಮಾತೆ ಮಹಾದೇವಿಯವರು ಪ್ರಾಚೀನ ಕಾವ್ಯಗಳಿಂದ ಪ್ರಭಾವಿತರಾಗಿ ಅಕ್ಕನ ಮಹಾ ಜೀವನವನ್ನು ಕಾದಂಬರಿಯ ರೂಪದಲ್ಲಿ ರಚಿಸಿದ್ದಾರೆ. ಅಕ್ಕನನ್ನು ದಿಟ್ಟತನ, ಛಲವಾದಿತನ, ವಿಮರ್ಶೆ ಪ್ರಜ್ಞೆ ಇರುವ ಪ್ರಗತಿಪರ ಮಹಿಳೆಯಂತೆ ಚಿತ್ರಿಸಿದ್ದಾರೆ. ಇದಕ್ಕೆ ಪ್ರತಿ ಪಾತ್ರವಾದ ಕೌಶಿಕನನ್ನು ರಾಜನಿಗೆ ಇರಬಹುದಾದ ರಾಗ ಭೋಗ ಲಾಲಾಸೆಯಿರುವ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾರೆ.

ಲಿಂಗಮ್ಮ ಗರ್ಭದಾರಣೆ ಮತ್ತು ಆನಂತರ ಸ್ಥಿತಿಯಲ್ಲಿನ ವರ್ಣನೆಯನ್ನು ಸವಿಸ್ತಾರವಾಗಿ ಕಾದಂಬರಿಕಾರರು ವಿವರಿಸಿದ್ದಾರೆ. ಬಹುಶಃ ಕಾದಂಬರಿಕಾರರು ಉದ್ದೇಶ ಬೆಳೆಯುವ ಸಸಿಮೊಳಕೆಯಲ್ಲಿ ಎಂಬಂತೆ ಮುಂದೆ ಎಂತಹ ವ್ಯಕ್ತಿತ್ವ ರೂಪುಗೊಳ್ಳುವುದು ಎಂಬ ಸೂಚನೆಯನ್ನು ಕೊಟ್ಟಂತಿದೆ. ಲಿಂಗಮ್ಮ ಪಾತ್ರದಲ್ಲಿ ವೈರುದ್ಯವನ್ನು ಸೃಷ್ಟಿಸಿದ್ದಾರೆ. ಈ ಪಾತ್ರ ಸಂದರ್ಭ ಸನ್ನಿವೇಶಕ್ಕೆ ಸಿಕ್ಕಿದ ತರಗೆಲೆಯಂತಾಗಿದೆ. ಲಿಂಗಮ್ಮ ಮೊದಲು ಅಧ್ಯಾತ್ಮದ ಒಲವು ತೋರಿದರು ಮಗಳು ಹುಟ್ಟಿದ ಬಳಿಕೆ ಲೌಕಿಕ ಬದುಕಿನ ಚೌಕಟ್ಟಿನಲ್ಲಿಯೇ ಆಕೆಯ ಆಲೋಚನೆಗಳು ಇರುತ್ತದೆ. ಓಂಕಾರಶೆಟ್ಟಿಗೆ ಮೊದಲೇ ಅಧ್ಯಾತ್ಮದತ್ತ ಒಲವಿತ್ತು ಎಂಬುದಕ್ಕೆ ನಿದರ್ಶನಗಳನ್ನು ಸಾಕಷ್ಟು ಕಾದಂಬರಿಕಾರರು ಕೊಟ್ಟಿದ್ದಾರೆ. ಆದ್ದರಿಂದ ತಾನು ಸಾಧಿಸಲಾರದನ್ನು ತನ್ನ ಮಗಳ ಮೂಲಕ ಸಾಧಿಸಲು ಅಭಿಲಾಷೆಯನ್ನು ಹೊಂದಿರುವ ವ್ಯಕ್ತಿಯಾಗಿದ್ದಾನೆ. ಬಹುಶಃ ಇವಳಿಗೆ ವೈರಾಗ್ಯ ಅಧ್ಯಾತ್ಮದತ್ತ ಮನಸ್ಸು ತಂದೆಯ ರಕ್ತದಿಂದಲೇ ಹರಿದು ಬಂದಿರಬೇಕೆಂಬುದನ್ನು ತೋರಿಸಲು ಈ ಹಿನ್ನೆಲೆಯನ್ನು ಪಾತ್ರಕ್ಕೆ ಕೊಟ್ಟಿರಬಹುದು. ಇಲ್ಲಿ ಬರುವ ಕೌಶಿಕನ

ಪಾತ್ರವನ್ನು ತಿಪ್ಪೇರುದ್ರಸ್ವಾಮಿಯವರಷ್ಟು ಉದಾತ್ತೀಕರಿಸಿಲ್ಲ. ಕಟ್ಟೀಮನಿಯವರಷ್ಟು ಕಡೆಗಣಿಸಿಯೂ ಇಲ್ಲ. ಕೌಶಿಕನ ಅರಮನೆಯಿಂದ ಹೊರಟ ಅಕ್ಕನ ದಿಗಂಬರತೆಯ ಬಗ್ಗೆ ಖಚಿತವಿದ್ದರೂ ಆನಂತರ ಲೇಖಕರೂ ಗೊಂದಲಕ್ಕೆ ಒಳಗಾದಂತೆ ಕಂಡುಬರುತ್ತಾರೆ. ಅರಮನೆಯಿಂದ ಶ್ರೀಶೈಲದತ್ತ ಪಯಣಿಸುವ ಅಕ್ಕನ ಚಿತ್ರ ಓದುಗರ ಹೃದಯದಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಅಕ್ಕನ ಅಹಂನಿರಸನವನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಕಾದಂಬರಿಯು ಹೆಜ್ಜೆ ಹೆಜ್ಜೆಗೂ ಕದಳಿಯ ಕರ್ಪೂರ ಕಾದಂಬರಿಯನ್ನು ಅನುಸರಿಸಿದೆ. ಕದಳಿಯ ಕರ್ಪೂರ ಕಾದಂಬರಿಯಂತೆಯೇ ಕಥೆಯ ಬಂಧ ನಿರೂಪಿತವಾಗಿದೆ. ಅಲ್ಲಿನ ಪಾತ್ರ, ಸನ್ನಿವೇಶ ಮುಂತಾದ ಅನೇಕ ವಿಷಯಗಳನ್ನು ಅಲ್ಲಿಂದ ಎರೆವಲು ಪಡೆದಂತೆ ಭಾಸವಾಗುತ್ತದೆ./ ಈ ಅಂಶಗಳನ್ನು ತೌಲನಿಕ ಅಧ್ಯಾಯದಲ್ಲಿ ನೋಡಬಹುದು. ಈ ಮಿತಿಗಳು ಏನೇ ಇದ್ದರೂ ಇದೊಂದು ಶ್ರೇಷ್ಠ ಕಾದಂಬರಿ ಮಟ್ಟದಲ್ಲಿ ನಿಲ್ಲಿಸಲಾಗದಿದ್ದರೂ ಒಂದು ಉತ್ತಮ ಕಾದಂಬರಿ ಎಂದು ಹೇಳಬಹುದು.

ಈ ಕಾದಂಬರಿಕಾರರು ಪ್ರಾರಂಭದಲ್ಲಿಯೇ ಅಕ್ಕನನ್ನು ಅತಿಮಾನುಷ ಸೃಷ್ಟಿ ಎಂಬಂತೆ ಚಿತ್ರಿಸಿದ್ದಾರೆ. ಇವಳ ಪ್ರತಿಯೊಂದು ಬೆಳವಣಿಗೆಗೂ ಅತಿಮಾನುಷ ಲೇಪನ ತರುತ್ತಿದ್ದಾರೆ ಎನಿಸುತ್ತದೆ. ಬಾಲ್ಯದಲ್ಲಿ ಸಹಜವಾಗಿರಬೇಕಾದ ಯಾವ ಗುಣಗಳು ಅಕ್ಕನಿಗೆ ಇಲ್ಲ. ಅವಳು ಆಡುವ ಆಟಗಳು ಶಿವಲೀಲೆಯಾಗಿ ಕಂಡುಬಂದಿದೆ. ಲೇಖಕಿಗೆ, ಅಕ್ಕನ ಐಕ್ಯವನ್ನು ಅತಿಮಾನುಷ ಕಲ್ಪನೆಯಲ್ಲಿಯೇ ತರುತ್ತಾರೆ. ಅವಳ ಜನನವನ್ನು "ಕಾರಣಿಕ ಕನ್ಯೆ" ಎಂಬ ಹಿನ್ನೆಲೆಯಲ್ಲಿ ಚಿತ್ರಿಸುತ್ತಾರೆ. ಕಾದಂಬರಿಯ ಆದಿ ಮತ್ತು ಅಂತ್ಯಗಳನ್ನು ಅವಾಸ್ತವಿಕ ನೆಲೆಯಿಂದಲೇ ನೋಡಿದ್ದಾರೆ. ಇಲ್ಲೆಲ್ಲಾ ಕಾದಂಬರಿಕಾರರು ಅಕ್ಕ ಐತಿಹಾಸಿಕ ವ್ಯಕ್ತಿ ಎಂಬುದನ್ನು ಮರೆತಂತೆ ಕಾಣುತ್ತದೆ. ಜೊತೆಗೆ ಅಕ್ಕ ಬದುಕಿದ್ದು ಎರಡನೇ ಶತಮಾನದ ಶರಣ ಪರಿಸರದಲ್ಲಿ ಆ ಸಮಾಜದ ಏಳು-ಬೀಳುಗಳು, ಅಲ್ಲಿನ ರಾಜಕೀಯ ಸ್ಥಿತಿಗತಿಗಳು, ಮತಗಳ ಮೇಲಾಟಗಳನ್ನು ಕಾದಂಬರಿಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಕಾದಂಬರಿಕಾರರು ಮಾಡಿಲ್ಲ.

~*~*~*~*~*~

## ಅಧ್ಯಾಯ : ೬

# ಕಾದಂಬರಿಯ ಅಭಿವ್ಯಕ್ತಿ

ಒಂದು ಕಾದಂಬರಿ ಎಂದ ತಕ್ಷಣ ಅದು ಬದುಕಿನಲ್ಲಿ ನಿತ್ಯ ನಮ್ಮ ಅನುಭವ ಕಕ್ಷೆಯಲ್ಲಿ ಬಂದುಹೋಗುವಂತಹ ಸಾಮಾನ್ಯ ಜನರ ಸನ್ನಿವೇಶಗಳ ನಿರ್ಮಾಣವಾಗಿದೆಂದು ಭಾವಿಸುವುದು ಸಹಜ. ಆದರೆ ಅಸಮಾನ್ಯ ವ್ಯಕ್ತಿಗಳ ಅನುಭವ ಸನ್ನಿವೇಶಗಳನ್ನು ಒಂದು ಕಲಾಕೃತಿಯಲ್ಲಿ ತರುವುದು ಸುಲಭದ ಮಾತಲ್ಲ. ಬುದ್ಧ, ಬಸವ, ಯೇಸು ಇಂತಹ ಗಟ್ಟಿ ವಸ್ತುವನ್ನು ಕಥಾವಸ್ತುವಾಗಿ ಆಯ್ಕೆ ಮಾಡಿಕೊಂಡಾಗ ಅಲ್ಲಿ ಬರುವ ಪಾತ್ರಗಳು ಘಟನೆಗಳು ಕಾಣುವ ದೃಷ್ಟಿ ನಿರೂಪಿಸುವ ಕೋನ ಸಂಭಾಷಣೆ ಎಲ್ಲವೂ ಬಹಳ ಮುಖ್ಯವಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಸಾಹಿತಿಯಾದವನು ಸಮರ್ಥವಾಗಿ ಚಿತ್ರಿಸಬೇಕಾಗುತ್ತದೆ. ಇಲ್ಲವಾದರೆ ಜನಮಾನಸದಲ್ಲಿ ಹಡಗಿರುವ ಭಾವನೆಗಳಿಗೆ ಧಕ್ಕೆಯನ್ನುಂಟುಮಾಡುತ್ತದೆ. ಈ ಎಲ್ಲಾ ಸಂಗತಿಗಳನ್ನು ಮನಗೊಂಡಾಗ ಕೃತಿಯನ್ನು ರಚಿಸಿದಾಗ ಮಾತ್ರ ಅದೊಂದು ಯಶಸ್ವಿ ಕಾದಂಬರಿ ಅಥವಾ ಕಲಾಕೃತಿಯಾಗುವುದಕ್ಕೆ ಸಾಧ್ಯ. ಪ್ರಸ್ತುತ ಅಧ್ಯಾಯದಲ್ಲಿ ಸಾಹಿತಿಗಳ ಆಯ್ಕೆ ಮಾಡಿಕೊಂಡಿರುವ ವಸ್ತು ಅಕ್ಕ ಮಹಾದೇವಿ, ಅಕ್ಕನ ಜೀವನ ಒಂದು ಸಮಾಜ ಕಥನ, ಇವಳ ಹಿಂದೆ ಒಂದು ಧರ್ಮದ ಇತಿಹಾಸವಿದೆ. ಸಾಹಿತ್ಯ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿದೆ. ಇಂತಹ ವಸ್ತುವಿನ ನಿರ್ವಹಣೆಯನ್ನು ಕಾದಂಬರಿಕಾರರು ನಿರೂಪಿಸಿರುವ ವಿಧಾನಗಳ ಚರ್ಚೆ ಇಲ್ಲಿದೆ.

ಗಿರಿಯನವಿಲು ಉಳಿದೆರಡು ಕಾದಂಬರಿಗಳಿಗಿಂತ ಭಿನ್ನವಾಗಿದೆ. ಇದಕ್ಕೆ ಕಾರಣ ಲೇಖಕರ ವ್ಯಕ್ತಿತ್ವ ಮತ್ತು ಮನೋಧರ್ಮ. ಕಟ್ಟೀಮನಿಯವರು ಪ್ರಗತಿ ಶೀಲ ಲೇಖಕ. ಇವರು ವಾಸ್ತವತೆಗೆ ಸಹಜ ನಡವಳಿಕೆಗೆ ಹೆಚ್ಚು ಮಹತ್ವ ನೀಡುವರೆಂಬುದು ತಿಳಿದಿರುವ ವಿಷಯ. ಇದ'ರ ಭಾಷೆಯ ಬಳಕೆ ನೇರವಾದದ್ದು. ಜೊತೆಗೆ ಉತ್ಸುಕತೆಯಿಂದ ಕೂಡಿದ್ದು, ಈ ಅಂಶಗಳೇ ಕಾದಂಬರಿಯಲ್ಲಿಯೂ ಮೂಡಿಬಂದಿದೆ.

ಕಾದಂಬರಿಯ ಆರಂಭ ನಿರ್ಮಲಶೆಟ್ಟಿ ಮತ್ತು ಸುಮತಿ ದಂಪತಿಗಳಿಗೆ ಮಕ್ಕಳಿಲ್ಲ ಎಂಬ ಕೊರಗಿನಿಂದಲೇ ತಮ್ಮ ಕಥಾವಸ್ತುವಿಗೆ ಪ್ರವೇಶವನ್ನು ಮಾಡಿದ್ದಾರೆ. ಕಾದಂಬರಿಯು ಅಕ್ಕನ ಜನನದ ಹಿನ್ನೆಲೆ ಹೇಳುತ್ತಲೇ ಮುಂದುವರೆಯುತ್ತದೆ. ಕಾದಂಬರಿಯ ಒಳಗಡೆ ಅಲ್ಲಲ್ಲಿ ಲೇಖಕರ ಕಲ್ಪನೆಗಳು ಸ್ಪಷ್ಟವಾಗಿ ಕಂಡುಬರುತ್ತದೆ. ಉದಾಹರಣಗೆ ಕಮಲಾಂಬಿಕೆ

ಪಾತ್ರ ಸೃಷ್ಟಿ, ಅಕ್ಕ ಮತ್ತು ಕಮಲ ಪಾತ್ರಗಳ, ವೈರುದ್ಯ, ಮುಂತಾದವು. ಆದರೆ ಇದರಿಂದಾಗಿ ಕಥಾವಸ್ತುವಿಗೆ ಕುಂದುಂಟಾಗಿಲ್ಲ.

ಕಟ್ಟೀಮನಿಯವರು ತನ್ನ ಕಥಾವಸ್ತುವಿನ ಕೇಂದ್ರ ಪ್ರಜ್ಞೆಯನ್ನು ಬಿಟ್ಟು ಆಚೆ ಈಚೆಗೆ ಹೋಗಿಲ್ಲ. ಈ ಕಾದಂಬರಿಯಲ್ಲಿ ಪುಟ್ಟ ಪುಟ್ಟ ಸಂಭಾಷಣೆಗಳು ಅಲ್ಲಲ್ಲಿ ಮೂಡಿದೆ. ಇದು ನಾಟಕೀಯತೆಯಿಂದ ಕೂಡಿದ್ದು ಕಥೆಯನ್ನು ಸರಾಗವಾಗಿ ಓಡಿಸಿಕೊಂಡು ಹೋಗುತ್ತದೆ. ತಂದೆ ಮಗಳು ಚನ್ನಮಲ್ಲಿಕಾರ್ಜುನನ ಗುಡಿಗೆ ಹೋದಾಗ ನಡೆಸುವ ಸಂಭಾಷಣೆ, ತಾಯಿ ಮಗಳ ಸಂಭಾಷಣೆ, ಗೆಳತಿ ಕಮಲಲೊಂದಿಗಿನ ಸಂಭಾಷಣೆಗಳು ಪುಟ್ಟ ಪುಟ್ಟ ಮಾತುಗಳಲ್ಲಿಯೇ ಪ್ರಶ್ನೆ ಮತ್ತು ಉತ್ತರಗಳಲ್ಲಿ ಕಂಡುಬರುತ್ತದೆ. ವಯಸ್ಸಿನ ಸಹಜ ಮಾತುಗಳನ್ನು ಲೇಖಕರು ಸೊಗಸಾಗಿ ಚಿತ್ರಿಸಿದ್ದಾರೆ.

ಉದಾಹರಣೆಗೆ ವಿದ್ಯಾಭ್ಯಾಸವನ್ನು ಕುರಿತು ತಾಯಿಯನ್ನು ಕೇಳುವ ಪರಿ ಈ ರೀತಿ ಇದೆ.

'ಯಾಕವ್ವ ಓದಲಿಲ್ಲ ?'

'ನಮಗಾರವ್ವ ಕಲಿಸುವವರು ?'

'ಅಪ್ಪಾಜಿಗೆ ಯಾರು ಕಲಿಸಿದರು ?'

'ಗುರುಗಳು_'

'ಅವರು ನಿನಗೂ ಕಲಿಸಲಿಲ್ಲವೇಕೆ?'

ಹಾಗೆಯೇ ಅಕ್ಕ ತನ್ನ ತಂದೆಯನ್ನು ತಾನು ಆಡಿದ ಆಟದ ವಿಮರ್ಶೆಯಲ್ಲಿ ತೊಡಗುವ ಅವಳ ವಿಚಾರ ಶಕ್ತಿ ಹೇಗೆಂಬುದಕ್ಕೆ ಸಾಕ್ಷಿಯಾಗಿದೆ. ಈ ಸಂಭಾಷಣೆ ಲೋಕಕ್ಕೆಲ್ಲಾ ಗಂಡ ಚನ್ನ ಮಲ್ಲಿಕಾರ್ಜುನ ಎಂದ ತಂದೆಯ ಮಾತಿಗೆ ಅಕ್ಕನ ಪ್ರತಿಕ್ರಿಯೆಗಳು ಮೂಡಿದ ರೀತಿ ಹೀಗಿದೆ,

'ಗಂಡಸರು, ಹೆಂಗಸರು ಎಲ್ಲರಿಗೂ ಗಂಡ ನಮ್ಮ
ಮಲ್ಲಿಕಾರ್ಜುನ'

'ನಿನಗೂ ಅವನೇ ಗಂಡನೇ ಅಪ್ಪಾಜಿ?'

'ಹೌದು ತಾಯಿ.'

'ಅವ್ವನಿಗೂ?'

'ಆಕೆಗೂ.'

'ಹಾಗಾದರೆ ನೀನು ಅವ್ವನ ಗಂಡ ಅಲ್ವೇನೂ?'

ಎಂದು ಹೇಳುವ ಅಕ್ಕನ ತಿಳುವಳಿಕೆ ಶ್ಲಾಘನೀಯ. ಕಟ್ಟೀಮನಿಯವರು ಕಾದಂಬರಿಯಲ್ಲಿ ತಂತ್ರಗಳನ್ನು ಬಳಸಿರುವ ರೀತಿ ಮೆಚ್ಚಿಕೊಳ್ಳವಂತಹದು. ಅಕ್ಕನ ಜೀವನದಲ್ಲಿ ಅವಳ ವಚನಗಳಿಂದ ನಿರೂಪಿಸುವ ವಿಧಾನ. ಲೇಖಕರ ಕೃತಿಗೆ ಆಕರ ಹರಿಹರನ ರಗಳೆ, ಹರಿಹರ ಅಕ್ಕನನ್ನು ಅವತಾರ ಸ್ತ್ರೀ ಎಂದು ಚಿತ್ರಿಸಿದ್ದಾನೆ. ಇದನ್ನು ಲೇಖಕರು ಸುಮತಿಯ ಕನಸಿನ ರೂಪದಲ್ಲಿ ಚಿತ್ರಿಸಿರುವ ರೀತಿ ಸೊಗಸಾಗಿದೆ. ಹಾಗೆಯೇ ಅಕ್ಕ ಮದುವೆಗೆ ಮುಂಚೆ ಚೆನ್ನಮಲ್ಲಿಕಾರ್ಜುನನೆಂಬ ಜಂಗಮನನ್ನು ಪ್ರೀತಿಸುತ್ತಿದ್ದಳು. ಆದ್ದರಿಂದಾಗಿ ನನ್ನ ಮೇಲೆ ಒಲವು ಕಡಿಮೆಯಾಗಿ ಕೌಶಿಕ ಭಾವಿಸುವ ಪರಿ ಸೊಗಸಾಗಿ ನಿರೂಪಿತವಾಗಿದೆ.

ಕಟ್ಟೀಮನಿಯವರು ತಾವು ಕಂಡ ಸಮಾಜವನ್ನು ಕಂಡರಿಸುವುದಕ್ಕಾಗಿ ಸಾಹಿತ್ಯವನ್ನು ಬಳಸಿಕೊಳ್ಳುವ ಹಠತೊಟ್ಟವರು. ಇದನ್ನು ಪಾತ್ರಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.ಇದಕ್ಕೆ ಉದಾಹರಣೆಯಾಗಿದೆ ಅಕ್ಕ ವಸಂತಕನಿಗೆ ಕೊಡುವ ಉತ್ತರ.

'ಪ್ರೇಮ! ಪ್ರೇಮ!. ಆ ಒಳ್ಳೆಯ ಶಬ್ದವನ್ನು ಸುಮ್ಮನೆ ಸುಮ್ಮನೆ ಕೆಡಿಸುತ್ತೀರಾ?. ಕಂಡ ಕಂಡ ಕುಲೀನ ಕನ್ಯೆಯರೆನ್ನೆಲ್ಲಾ ಬಯಸುತ್ತಾ ಹೋಗುವುದು ಪ್ರೇಮವಲ್ಲ. ನೀಚಕಾಮ... ಕೇವಲ ಕಾಮ... '

ಎಂದು ಅಕ್ಕ ಹೇಳಿದರೆ, ನಿರ್ಮಲ ಶೆಟ್ಟಿ.ಯ ಮಾತುಗಳು ಈ ರೀತಿ ಇದೆ

'ಮೆರವಣಿಗೆಯ ಕಾಲಕ್ಕೆ ಹಾಗೆ ನಡೆದದ್ದು ನಿಮಗಾದರೂ ಸರಿಯನಿಸಿತೇ' ಎಂದು ಪ್ರಶ್ನಿಸುವ ದಾಟಿ ಅಂದಿನ ವ್ಯವಸ್ಥೆಯನ್ನು ವಿಮರ್ಶಿಸುವ ರೀತಿ ಸೊಗಸಾಗಿದೆ.

(ಕಟ್ಟೀಮನಿಯವರ ಸಂಭಾಷಣೆ ನಾಟಕೀಯ ಶೈಲಿಯೊಂದಿಗೆ ಜೀವಂತಿಕೆಯನ್ನು ಪಡೆದಿದೆ. ೧೨ನೇ ಶತಮಾನದ ಪರಿಸರವನ್ನು ಚಿತ್ರಿಸುತ್ತಾ ಬಂದ ಲೇಖಕರು ಮಧ್ಯೆ ಮಧ್ಯೆದಲ್ಲಿ ಸಮಕಾಲೀನ ಶಬ್ದಗಳನ್ನು ಬಳಕೆ ಮಾಡಿದ್ದಾರೆ. ಉದಾಹರಣೆಗೆ ಯಾಕ್ರೀ, ಬನ್ರೀ, ಹೋಗ್ರೀ, ಶಿಫಾರಸ್ಸು ಮುಂತಾದ ಶಬ್ದಗಳು ಈ ಕಾಲಮಾನದವು ಹಿಂದಿನ ಕಾಲದಲ್ಲಿ ಈ ಶಬ್ಧಗಳ ಬಳಕೆ ಇರಲಿಲ್ಲ.) ಕಟ್ಟೀಮನಿಯವರು ದಿನಬಳಕೆಯ ಮಾತಿನಂತೆಯೇ ಕಾದಂಬರಿಯಲ್ಲಿಯೂ ಭಾಷೆಯನ್ನು ದುಡಿಸಿಕೊಂಡಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಅಕ್ಕ ಗೆಳತಿಗೆ ಚಂದ್ರಗುಪ್ತ ರಾಜನ ಕಥೆಯನ್ನು ಹೇಳಿದಾಗ ಆನಂತರ ಸಂಭಾಷಣೆ ಈ ರೀತಿ ಇದೆ.

'ಇದೆಂಥಾ ಬಯಕೆಯೇ ಅವಳದು; ದೇವರನ್ನು ಯಾರಾದರೂ

'ಮದುವೆಯಾಗುತ್ತಾರೆಯೇ?'

'ಯಾಕಾಗಬಾರದು?'

'ಪರ್ವತರಾಜನ ಮಗಳು ಪಾರ್ವತಿಯು ತಪಸ್ಸು ಮಾಡಿ, ಶಿವನನ್ನು

ಮದುವೆಯಾಗಲಿಲ್ಲವೇ?'

ಹೀಗೆ ಮುಂದುವರೆಯುವ ಸಂಭಾಷಣೆ ಕಮಲಳ ಸಂಶಯ. ಆಕೆಯ ಸಂಶಯಕ್ಕೆ ತಕ್ಕ ಉತ್ತರ ಬಂದೊಡನೆಯೇ ಹೇಗಿದ್ದರೂ ಸರಿ ಎಂಬ ಒಪ್ಪಿಗೆಯ ಮಾತುಗಳ ದಿನನಿತ್ಯದ ಬಳಕೆಯ ಮಾತಿನ ದಾಟಿಯನ್ನು ಕಾಣಬಹುದು.

ಐತಿಹಾಸಿಕ ಕಾದಂಬರಿಯನ್ನು ರಚಿಸುವಾಗ ಸಮಕಾಲೀನತೆಯನ್ನು ಕಾದಂಬರಿಕಾರ ತ್ಯಜಿಸಬೇಕಾಗುತ್ತದೆ. ತಾನು ಆಯ್ಕೆ ಮಾಡಿಕೊಂಡ ವಸ್ತುವಿನ ಕಾಲ ಮತ್ತು ಪರಿಸರದಲ್ಲಿ ನಿಂತು ಕಥೆಯನ್ನು ಎಣೆಯಬೇಕಾಗುತ್ತದೆ. ಇಂತಹ ಒಂದು ಪರಿಸರ ನಿರ್ಮಿಸುವುದರಲ್ಲಿ ಕಟ್ಟೀಮನಿಯವರು ಯಶಸ್ವಿಯಾಗಿದ್ದಾರೆ. ಅರಮನೆಯ ಪರಿಸರ, ಅರಮನೆಯ ವ್ಯಕ್ತಿಗಳ ಸ್ವಭಾವಗಳು, ಸ್ವಾರ್ಥಿಗಳ ನಡವಳಿಕೆ ಪ್ರತಿಯೊಬ್ಬರು ತಮ್ಮ ಸ್ಥಾನ ಮಾನಗಳಿಗಾಗಿ ಹೋರಾಟ, ರಕ್ಷಿಸಿಕೊಳ್ಳುವ ಭರದಲ್ಲಿ ಅಪಪ್ರಚಾರ, ಅರಸನ ಕೃಪೆಗೆ ಪಾತ್ರರಾಗುವ ತವಕ, ಚಾಡಿಕೋರತನ, ಮುರಾರಿಯ ದುಷ್ಟತನ, ಶೈವಧರ್ಮದ ಖಂಡನೆ, ರಾಜನಿಗೆ ಆ ಧರ್ಮದ ಬಗ್ಗೆ ತಪ್ಪು ತಿಳುವಳಿಕೆ ಮೂಡಿಸುವುದು, ಮತಗಳ ಮೇಲಾಟ ಹೀಗೆ ಅಂದಿನ ಸಮಾಜದ ವಾಸ್ತವ ಚಿತ್ರಣವನ್ನು ಕಣ್ಣಿಗೆ ಕಟ್ಟಿಕೊಡುವ ಪ್ರಯತ್ನವನ್ನು 'ಗಿರಿಯನವಿಲು' ಕಾದಂಬರಿ ಮಾಡಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕಟ್ಟೀಮನಿಯವರ ಕಾದಂಬರಿ ನೈಜ ದೃಷ್ಟಿ ಕೋನವನ್ನು ಒಳಗೊಂಡಿದೆ. 'ಕಾದಂಬರಿಯಲ್ಲಿ ಬಹಳಷ್ಟು ಕಡೆ ಜಾಣತನ ಕುಸುರಿ ಕೆಲಸಗಳಿಗೆ ಮನಸ್ಸು ಕೊಡುವುದಿಲ್ಲ. ಬದಲಿಗೆ ನೇರ ನಿರೂಪಣಾ ತಂತ್ರವನ್ನು ಬಳಸುತ್ತಾರೆ. ಇದು ಒಂದು ಕೃತಿಯ ಆಳಕ್ಕಿಂತ ಹರಹಿಗೆ ಹೆಚ್ಚು ಮಹತ್ವನ್ನು ನೀಡುವ ಸಾಂಭವ್ಯತೆ ಕಂಡುಬರುತ್ತದೆ'[೧] ಎನ್ನುವ ವಿಮರ್ಶಕರ ಮಾತನ್ನು ಈ ಕಾದಂಬರಿಗೂ

---

ಸಾಲುದೀಪಗಳು ಪುಟ ಸಂಖ್ಯೆ - ೩೭೭

ಅನ್ವಯಿಸಬಹುದು. ಕಾದಂಬರಿಕಾರರು ಅಕ್ಕನ ವೈವಾಹಿಕ ಜೀವನವನ್ನು ಸುದೀರ್ಘವಾಗಿ ಚಿತ್ರಿಸಿ, ಆಕೆಯ ಅನಂತರದ ಜೀವನವನ್ನು ಮೊಟಕುಗೊಳಿಸಿದ್ದಾರೆ. ಈ ದೃಷ್ಟಿಯಿಂದ ಉಳಿದೆರಡು ಕಾದಂಬರಿಗಳಿಗೆ ಸರಿದೂಗದು ಎಂದು ಹೇಳಬಹುದಾದರೂ ಅವರ ವಾಸ್ತವಾಂಶವನ್ನು ಪುರಸ್ಕರಿಸಬೇಕಾಗುತ್ತದೆ.

**ಕದಳಿಯ ಕರ್ಪೂರ :**

ಆಧ್ಯಾತ್ಮಿಕ ಮನೋಧರ್ಮದ ಲೇಖಕರು ತಿಪ್ಪೇರುದ್ರಸ್ವಾಮಿಯವರ ಕದಳಿಯ ಕರ್ಪೂರ ಐತಿಹಾಸಿಕ ಕಾದಂಬರಿಯೂ ಹೌದು. ಆಧ್ಯಾತ್ಮಿಕ ಕಾದಂಬರಿಯೂ ಹೌದು, ಕೇವಲ ವೀರಶೈವ ಧರ್ಮದ ಪ್ರಚಾರಕ್ಕೆ ಈ ಕಾದಂಬರಿಯನ್ನು ಲೇಖಕರು ಬಳಸಿಕೊಂಡಿಲ್ಲ. ಮಾನವ ಧರ್ಮದ ಪ್ರಸಾರತೆ ಇದೆ. ಪರಮತಸಹಿಷ್ಣುತೆ ಇವರ ಕಾದಂಬರಿಯಲ್ಲೂ, ವ್ಯಕ್ತಿತ್ವದಲ್ಲೂ ಗೋಚರಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಕೌಶಿಕ ಮಹಾರಾಜ ಪಾತ್ರದ ಉದಾತ್ತೀಕರಣ. ಉಳಿದ ಕಾದಂಬರಿಗಳಲ್ಲಿ ಆತ ಜೈನಭವಿ ಅದಕ್ಕೆ ಮಗಳನ್ನು ಕೊಡುವುದಿಲ್ಲವೆಂದು ಅಕ್ಕನ ತಂದೆ ತಾಯಿಗಳು ಹೇಳಿದರೆ ಕದಳಿಯ ಕರ್ಪೂರ ಕಾದಂಬರಿಯಲ್ಲಿ ನಾವು ನಿಷ್ಠಾವಂತ ಶಿವಭಕ್ತರಾದ ಕಾರಣ ಮಗಳನ್ನು ಕೊಡುವುದಿಲ್ಲವೆಂದು ಓಂಕಾರಶೆಟ್ಟಿ ಲಿಂಗಮ್ಮ ಹೇಳುತ್ತಾರೆ. ಮದುವೆ ಎಂದರೆ ಪರಸ್ಪರ ಪ್ರೀತಿಯಿಂದ ಆಗುವುದು ಎಂದು ಹೇಳುವುದರ ಮೂಲಕ ಮತಗಳ ಮೇಲಾಟಕ್ಕೆ ತೆರೆ ಎಳೆಯುತ್ತಾರೆ.

ಕಾದಂಬರಿಯು ಕಥಾವಸ್ತುವಿನ ಕೇಂದ್ರ ಪ್ರಜ್ಞೆಯಿಂದ ಕದಲುವುದಿಲ್ಲ. ಈ ಕಾದಂಬರಿಯ ಪ್ರಾರಂಭವು ಅಕ್ಕನ ಬಾಲ್ಯದೊಂದಿಗೆ ಪ್ರಾರಂಭವಾಗುತ್ತದೆ. ಅನಂತರ ಓಂಕಾರ ಮತ್ತು ಲಿಂಗಮ್ಮರ ಸ್ಮರಣೆಯ ಮುಖಾಂತರ ಅಕ್ಕನ ಜನನದ ಹಿನ್ನೆಲೆಯನ್ನು ಸ್ಪಷ್ಟಪಡಿಸುತ್ತಾರೆ, ಇಲ್ಲಿ ಕಾದಂಬರಿಕಾರರು ಸಿಂಹಾವಲೋಕನ ತಂತ್ರವನ್ನು ಬಳಸುತ್ತಾರೆ. ಓಂಕಾರ ಲಿಂಗಮ್ಮರ ಸ್ಮರಣೆಯು ಪ್ರಥಮ ಪುರುಷರಲ್ಲಿ ಕಥೆಯನ್ನು ಹೇಳುತ್ತಾರೆ. ಕಾದಂಬರಿಕಾರರು ಕಾದಂಬರಿಗೆ ಇಟ್ಟಿರುವ ಶೀರ್ಷಿಕೆಯೇ ಅತ್ಯಂತ ಧ್ವನಿಪೂರ್ಣ ಕಲಾತ್ಮಕತೆಗೆ ಸಾಕ್ಷಿಯಾಗಿದೆ. 'ಕದಳಿಯ ಕರ್ಪೂರ' ಹೆಸರೇ ಕಾದಂಬರಿಯತ್ತ ಸೆಳೆಯುತ್ತದೆ. ಕಾದಂಬರಿಯ ಅಂತರಂಗವನ್ನು ಸ್ಪರ್ಶಿಸುತ್ತದೆ. ಇದಿಷ್ಟೇ ಅಲ್ಲದೆ ಕಾದಂಬರಿಯ ಅಧ್ಯಾಯಗಳಿಗೆ ಕೊಟ್ಟಿರುವ ಹೆಸರುಗಳಲ್ಲಿಯೂ ಕಲಾತ್ಮಕತೆ ಇದೆ.

ಉದಾಹರಣೆಗೆ ಬೆಳೆಯುವ ಬೆಳಕು, ದಿಗಂಬರದ ದಿವ್ಯಂಬರೆ ಮುಂತಾದವುಗಳು. ಇದಲ್ಲದೆ ಕಾದಂಬರಿಯ ಒಳಗಡೆಯೇ ಇಂತಹ ಕಲಾತ್ಮಕತೆಯ ಸ್ಪರ್ಶಗವೆ. ಇದರಲ್ಲಿ ಒಂದನ್ನು ಹೇಳುವುದಾದರೆ ಅಕ್ಕ ಕಲ್ಯಾಣವನ್ನು ಪ್ರವೇಶಿಸುವ ಮುನ್ನಿನ ಚಿತ್ರ.

'ಬಹುಕಾಲ ತನ್ನೀ ತಪಸ್ಸು ಸಿದ್ದಿಸುವ ಮಹೂರ್ತವನ್ನು ನಿರೀಕ್ಷಿಸುತ್ತಿರುವ
ಯೋಗಿಯಂತೆ ಮಹಾದೇವಿ ಕಲ್ಯಾಣದತ್ತ ದೃಷ್ಟಿಯನ್ನು ಅರಸಿದಳು
ಗೂಡನ್ನು ಸೇರಿಕೊಳ್ಳುವ ಹಕ್ಕಿ, ಗೂಡಿನ ಸುತ್ತ ಸ್ವಲ್ಪ ಹೊತ್ತು ಹಾರಾಡಿ
ಅನಂತರ ಒಳಗೆ ಹೋಗುವಂತೆ ಕಲ್ಯಾಣವನ್ನು ಪ್ರವೇಶಿಸುವ ಮುನ್ನ
ಮಹಾದೇವಿಯ ದೃಷ್ಟಿ ಕಲ್ಯಾಣದ ಸುತ್ತ ಪ್ರದಕ್ಷಿಣೆಯನ್ನು
ಹಾಕುತ್ತಿರುವಂತೆ
ತೋರುತ್ತಿತ್ತು.'

ಕದಳಿಯ ಕರ್ಪೂರ ಕಾದಂಬರಿಯಲ್ಲಿ ಸಂಭಾಷಣೆಗಳು ಇತ ಮಿತವಾಗಿ ಮೂಡಿಬಂದಿದೆ. ಆದರೆ ಪರಿಣಾಮಕಾರಿಯಾಗಿದೆ. ಅಕ್ಕ ಮತ್ತು ಅಲ್ಲಮ, ಅಕ್ಕ ಮತ್ತು ಕಿನ್ನರಿಬೊಮ್ಮಣ್ಣ, ನೀಲಾಂಬಿಕೆ ಮತ್ತು ಬಸವಣ್ಣ, ಅಕ್ಕ ಮತ್ತು ಗುರುಲಿಂಗದೇವರ ಮುಂತಾದವರ ಸಂಭಾಷಣೆಗಳು ಸೊಗಸಾಗಿ ಮೂಡಿಬಂದಿದೆಯಲ್ಲದೆ, ಏಕ ಕಾಲದಲ್ಲಿ ಎರಡು ಪಾತ್ರಗಳ ವ್ಯಕ್ತಿತ್ವದ ಮೇಲೂ ಚೆಲ್ಲುತ್ತದೆ. ಈ ಸಂಭಾಷಣೆಗಳು ಗಿರಿಯ ನವಿಲು ಕಾದಂಬರಿಯಂತೆ ಸಂಕ್ಷಿಪ್ತವಾಗಿಲ್ಲ. ಈ ಕಾದಂಬರಿಯ ಒಂದು ಸಂಭಾಷಣೆಯ ರೀತಿ ಹೀಗಿದೆ. ಅಕ್ಕನ ಕೌಶಿಕನ ಅರಮನೆಗೆ ಆತನ ಒತ್ತಾಯಕ್ಕೆ ಮಣಿದು ಹೋದಾಗ, ಜನ ಸಮೂಹದಲ್ಲಿ ನಡೆದ ಸಂಭಾಷಣೆಯ ನಿರೂಪಣೆ

"ಅದೃಷ್ಟ ಎಂದರೆ ಹೀಗಿರಬೇಕು, ಇದ್ದಕ್ಕಿದ್ದಂತೆ ರಾಜನ ಹೆಂಡತಿಯಾಗುವುದು ಸಾಮಾನ್ಯವೇನಯ್ಯ?"

"ಸುಮ್ಮನೆ ಇರಯ್ಯ, ಮಹಾದೇವಿಯಂತಹ ಹೆಂಡತಿ ಸಿಗಬೇಕಾದರೆ ಪುಣ್ಯ ಮಾಡಿದ್ದ ರಾಜ. ಭಾಗ್ಯ ಮಹಾದೇವಿಯಲ್ಲ. ಆತನದು."

"ಅದು ಸರಿ, ಅಂತಹ ಏಕೈಕ ನಿಷ್ಠಾವಂತ ಶಿವಭಕ್ತರೆಂದು ನಾವು ತಿಳಿದಿದ್ದ, ಆ ದಂಪತಿಗಳು ಅದು ಹೇಗೆ ಮಗಳನ್ನು ರಾಜನಿಗೆ ಕೊಟ್ಟರು?"

"ರಾಜನಿಗೆ ಹೆದರಿ ಕೊಟ್ಟಿರಬೇಕುಮ ಪಾಪ ! ಅದೂ ನಿಜ ಅನ್ನೂ, ರಾಜನನ್ನೂ ಎದರಾಕಿಕೊಂಡು ಬದುಕುವುದಕ್ಕಾಗುತ್ತದೆಯೇ?"

"ರಾಜನೇ ಮನೆಯ ಬಾಗಿಲಿಗೆ ಬಂದಿರುವಾಗ ಆ ಸಂಪತ್ತನ್ನು ತಿರಸ್ಕರಿಸಲು ಯಾರಿಗಾದರೂ ಮನಸ್ಸು ಬರುತ್ತದನೇಯ್ಯಾ?"

"ಅದಿರಲು, ಕಳುಹಿಸುವವರು ಮದುವೆಯನ್ನಾದರೂ ಮಾಡಿ ಕಳುಹಿಸಬಾರದಿತ್ತೇ? ಅಂತಃಪುರಕ್ಕೆ? ಹಾಗೇ ಒಪ್ಪಿಸುವುದೇ"

"ಮದುವೆಯಾಯಿತಲ್ಲ !"

"ಅದಾವಗಪ್ಪ, ಮದುವೆ ಆದದ್ದು, ಯಾರಿಗೂ ಗೊತ್ತಿಲ್ಲದಂತೆ?"

"ಆಯ್ತುಂತೆ ಅರಮನೆಯಲ್ಲಿ; ಸಂಕ್ಷೇಪವಾಗಿ ಶಾಸ್ತ್ರ ಮುಗಿಸಿದರಂತೆ."

ಈ ರೀತಿಯ ಸಂಭಾಷಣೆ ನಿರೂಪಣೆ ಕಾದಂಬರಿಯಲ್ಲಿ ಬಹಳ ಇದೆ. ಕಾದಂಬರಿಯ ವಸ್ತು ಆಧ್ಯಾತ್ಮಿಕ ಜೀವಿಗೆ ಸಂಬಂಧಿಸಿದ್ದು, ಇದನ್ನು ಕಾದಂಬರಿಕಾರರು ಮರೆತಿಲ್ಲ, ಕಾದಂಬರಿಯನ್ನು ಆಧ್ಯಾತ್ಮಿಕ ಪಾತಾಳಿಯಲ್ಲಿಯೇ ಚಿತ್ರಿಸುತ್ತಾರೆ. ಅಕ್ಕನ ಧ್ಯಾನದಲ್ಲಿರುವಾಗ ಗವಿಯಿಂದ ಒಂದು ಹುಲಿ ಬರುತ್ತದೆ. ಆ ಹುಲಿ ಅಕ್ಕನ ಸುತ್ತ ಸುತ್ತುತ್ತಿರುವ ಒಂದ ದಿವ್ಯ ಪ್ರಭೆಯನ್ನು ನೋಡಿ ಓಡಿಹೋಗುತ್ತದೆ. ಮತ್ತೊಂದು ಸನ್ನಿವೇಶ ಅಕ್ಕನ ಐಕ್ಯದಲ್ಲಿ ವ್ಯಕಗೊಂಡಿದೆ. ಅದೇನೆಂದರೆ ಅಕ್ಕ, ಕೌಶಿಕ, ರಸವಂತಿಯವರು ಕದಳಿ ವನದ ಗುಹೆಯನ್ನು ಸಂದರ್ಶಿಸುತ್ತಾರೆ. ಅಲ್ಲಿ ಕದಳಿಫಲ ಸಾಕಷ್ಟಿದ್ದರೂ ನೀರಿನ ಕೊರತೆಯೊಂದು ಕಂಡಿತು. ಗವಿಯ ಒಂದು ಕಡೆಗೆ ಮರದ ತುಂಡು ಸಿಕ್ಕ ಕಾರಣ ನೀರು ಸಣ್ಣದಾಗಿ ಜಿನುಗುತ್ತಿರುತ್ತದೆ. ಕೌಶಿಕ ಕಲ್ಲಿನಿಂದ ಕುಟ್ಟಿದಾಗ ಮರದ ತುಂಡು ಹೊರಬಂದು ನೀರು ಕಾರಂಜಿಯಾಗಿ ಪುಟಿಯುತ್ತದೆ..... ಶ್ರೀಶೈಲವೇ ತಮ್ಮ ಸಾಧನ ರಂಗವಾಗಿ ಮಾಡಿಕೊಂಡ ಅಕ್ಕನ ವೈರಾಗ್ಯವನ್ನು ಯಾತ್ರಿಕರಿಗೆ ಸಾರುವಲ್ಲಿಯೇ ತಮ್ಮ ಜೀವನ ಸಾರ್ಥಕಮಾಡಿಕೊಳ್ಳುವುದಾಗಿ ಬೆಟ್ಟವನ್ನಿಳಿಯ ತೊಡಗುತ್ತಾರೆ. ಆಗ ಕದಳಿ ಗುಹೆಯ ಕಲ್ಲ ಮೇಲೆ ನಿಂತ ಅಕ್ಕನ ವಿಗ್ರಹ ಮರೆಯಾಗಿ ಅನುಪಮವಾದ ಬೆಳಕಿಗೆ ಚಕ್ರವೊಂದು ತಿರುಗುತ್ತಿರುವಂತೆ ತೋರಿತು. ಆ ಚಕ್ರದಿಂದ ರುದ್ರಾಕ್ಷಿಯನ್ನೇ ಕಂಕಣ ಮಾಡಿಕೊಂಡ ಹಸ್ತವು ಅವರನ್ನು ಆಶೀರ್ವದಿಸಿದಂತೆ ಕಂಡಿತು. ಈ ಎರಡು ಸನ್ನಿವೇಶಗಳು ಆಧ್ಯಾತ್ಮಿಕತೆಯನ್ನು ಎತ್ತಿ ಹಿಡಿಯುತ್ತದೆ.

ಕಾದಂಬರಿಗಳಲ್ಲಿ ವರ್ಣನೆಗಿಂತ ಸನ್ನಿವೇಶ ಚಿತ್ರಣಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ ಕಾದಂಬರಿಕಾರರು. ಸನ್ನಿವೇಶದ ಚಿತ್ರಣಗಳು ತುಂಬ ಸಹಜವಾಗಿ ಮೂಡಿಬಂದಿವೆ. ಈ ಕಾದಂಬರಿಯಲ್ಲಿ ಬರುವ ಉಡುತಡಿಯನ್ನು ಅಗಲುವ ಚಿತ್ರ, ಶ್ರೀಶೈಲ ಮತ್ತು ಕದಳಿ ವನದ ಚಿತ್ರಣ, ಕಲ್ಯಾಣದಲ್ಲಿ ಶರಣರನ್ನು ಅಗಲುವ ಮುಂತಾದ ಚಿತ್ರಣಗಳ ನಿರೂಪಣೆ ಕಣ್ಣ ಮುಂದೆ ನಿಂತಂತೆ ಭಾಸವಾಗುತ್ತದೆ. ಈ ಕಾದಂಬರಿಯಲ್ಲಿ ಒಂದು ಚಿತ್ರಣ ಹೀಗಿದೆ.

"ಪೂಜೆಗಾಗಿ ಮಡಿಯನ್ನುಟ್ಟ ಏಕ ವಸ್ತ್ರಧಾರಿಣಿಯಾಗಿ
ಕುಳಿತಿದ್ದುದರಿಂದ
ದುಂಡು ದುಂಡಾದ ಅವಳ ತೋಳಿನ ಬಹುಭಾಗವೆಲ್ಲಾ
ಗೋಚರಿಸುತ್ತಿತ್ತು. ಧ್ಯಾನ,
ತನ್ಮಯಳಾದ ಮಹಾದೇವಿಯ ಸೆರಗು ಜಾರಿತ್ತು.
ತೀರಾ ಸಮೀಪಕ್ಕೆ ಬಂದು,

ಒಂದು ಪಕ್ಕಕ್ಕೆ ಸರಿದು ನಿಂತು ಕೌಶಿಕ ದೃಷ್ಟಿ ಸ್ವೇಚ್ಛೆಯಾಗಿ ಮನಬಂದಂತೆ ಹರಿದಾಡಿತು, ಅವಳ ಬಾಹುಮೂಲಗಳ ಕಾಂತಿಯನ್ನು ಕಂಡು ರೋಮಾಂಚನಗೊಂಡಿತು. ದೃಷ್ಟಿ ಇನ್ನು ಒಳಗೆ ಹೋಯಿತು. ಧೀರ್ಘಕಾಲದಿಂದ ಅದು ಮೀಟಿದ್ದ ಮನಸ್ಸಿನ ಪಾಶವೀಶಕ್ತಿ ತನ್ನ ಸೇಡನ್ನು ತೀರಿಸಿಕೊಳ್ಳುವಂತೆ ಸರ್ವಶಕ್ತಿಯಿಂದ ಮೇಲಕ್ಕೆ ಪುಟಿದೆದ್ದಿತು, ಮಾನವತೆ ಮುಳುಗಿತು. ವಿವೇಕ ಕೊಚ್ಚಿಹೋಯಿತು. ಹುಚ್ಚನಂತೆ ಮುಂದೆ ನುಗ್ಗಿ ತನ್ನ ಕೈಗಳನ್ನು ಅವಳ ದೇಹದ ಮೇಲೆ ಹರಿಯಬಿಟ್ಟ.

ಹಾವು ಕಡಿದವಳಂತೆ ಮಹಾದೇವಿ ಹಿಂದಕ್ಕೆ ಹಾರಿದಳು. ಹಸಿದ ಹುಲಿಯಂತೆ ಬುಸುಗುಟ್ಟುತ್ತಾ, ಕೌಶಿಕ ಅವಳ ಸೆರಗನ್ನು ಹಿಡಿದ

'ಈ ಸೀರೆಯಲ್ಲಿ ಎಷ್ಟು ಸುಂದರಳಾಗಿ ಕಾಣುತ್ತೀ, ಮಹಾದೇವಿ ಎಂದು ಕಾಮದ ಕಳ್ಳನ್ನು ಕುಡಿದು ಉನ್ಮತ್ತನಾದವನಚಿತೆ ಮತ್ತೆ ಬೀಳಹೋದ'



ಮಹಾದೇವಿ ಮಿಂಚಿನಂತೆ ಹಿಂದಕ್ಕೆ ಹಾರಿದಳು. ಸೆರಗು ಕೌಶಿಕನ ಕೈಯಲ್ಲೇ ಇತ್ತು. ಮಹಾದೇವಿಯ ದೇಹದ ಅರ್ಧಭಾಗ ನಗ್ನವಾಗಿತ್ತು.

ಹುಚ್ಚನಂತೆ ಕೌಶಿಕ ಅವಳ ನಗ್ನ ಭಾಗದ ದೇಹವನ್ನು ದಿಟ್ಟಿಸುತ್ತಿದ್ದ. ಮಿಂಚಿಗಿಂತ ಮಿಗಿಲಾದ ವೇಗದಲ್ಲಿ ಭಾವನೆಗಳು ಮಹಾದೇವಿಯ ಮನಸ್ಸಿನಲ್ಲಿ ತಿರುಗಿದವು. ಮುಖ ಉಜ್ವಲವಾಗಿ ಹೊಳೆಯಿತು. ಕಾಂತಿ ಪ್ರವಾಹವೇ ಅವಳ ಪವಿತ್ರ ಕಣ್ಣುಗಳಿಂದ ಹರಿದು ಬರುತ್ತಿರುವಂತೆ ತೋರುತ್ತಿತ್ತು.

'ಮಹಾರಾಜ ನೋಡು, ಇದಕ್ಕಾಗಿ ಹಾತೊರೆಯುತ್ತಿದ್ದೆಯಲ್ಲವೆ? ನೋಡು; ದೇಹದ ಮೋಹವನ್ನು ಹಚ್ಚಿಕೊಂಡು ಕುಣಿಯುತ್ತಿರುವ ನಿನ್ನ ಈ ಹುಚ್ಚು ಕಣ್ಣುಗಳಿಂದ ಚೆನ್ನಾಗಿ ನೋಡು. ಈ ಸೀರೆಯಲ್ಲಿ ನಾನು ಬಹಳ ಸುಂದರಳಾಗಿ ಕಾಣುತ್ತೇನಲ್ಲವೆ? ಇದನ್ನು ತೆಗೆದೊಗೆಯುತ್ತೇನೆ, ಈ ಸೌಂದರ್ಯವನ್ನು ನೋಡು.' ಎನ್ನುತ್ತಾ ಉಟ್ಟಿದ್ದ ಸೀರೆಯನ್ನು ಆವೇಶಗೊಂಡು ಕಿತ್ತೆಸೆಯ ತೊಡಗಿದಳು. ಕೌಶಿಕನು 'ಬೇಡ ಮಹಾದೇವಿ, ಬೇಡ' ಎನ್ನುತ್ತಿದ್ದಂತೆಯೇ ಮಹಾದೇವಿಯ ಕೆಲಸ ಮುಗಿದಿತ್ತು."

ಕಾದಂಬರಿಕಾರರು ಐತಿಹಾಸಿಕ ವ್ಯಕ್ತಿಯೋರ್ವಳ ವಸ್ತುವನ್ನು ಕಾದಂಬರಿ ಒಳಗೊಂಡಿದೆ ಎಂಬುದನ್ನು ಮರೆತಿಲ್ಲ. ಕಾದಂಬರಿಯ ಹೆಜ್ಜೆ ಹೆಜ್ಜೆಗೂ ನಿದರ್ಶನಗಳಿಗೆ ವಚನಗಳನ್ನು ಉದ್ಧರಿಸುತ್ತಾ ಹೋಗಿರುವ ತಂತ್ರ ಸೊಗಸಾಗಿದೆ. ಇದರಿಂದಾಗಿ ಕಾದಂಬರಿಯನ್ನು ಓದಿದ ತಕ್ಷಣ ಅಕ್ಕ ಹೀಗೆಯೇ ಬದುಕಿದ್ದಾಳೇನೋ ಎಂಬ ವಾಸ್ತವ ಚಿತ್ರಣವನ್ನು ಕಣ್ಣ ಮುಂದೆ ಕಡೆದು ನಿಲ್ಲಿಸುತ್ತಾರೆ.

ಈ ಹಿಂದೆಯೇ ಹೇಳಿದಂತೆ ಚಾರಿತ್ರಿಕ ಕಾದಂಬರಿಗಳನ್ನು ರಚಿಸುವಾಗ ಕಾದಂಬರಿಕಾರ ತನ್ನ ಬೆನ್ನಿಗಂಟಿರುವ ಸಮಕಾಲೀನತೆಯನ್ನು ಪೂರ್ಣ ತ್ಯಜಿಸಿ ತಾನು ಆಯ್ದುಕೊಂಡಂತಹ ಕಥೆಯ ವಸ್ತುವಿನ ಕಾಲ ಮತ್ತು ಪರಿಸರದಲ್ಲಿ ನಿಂತು ಕಥೆಯನ್ನು ಹೇಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಕದಳಿಯ ಕರ್ಪೂರ ಕಾದಂಬರಿಯಲ್ಲಿ ಈ ಪ್ರಜ್ಞೆ ಮೂಡಿಬಂದಿಲ್ಲ. ಇದು ೧೨ನೇ ಶತಮಾನದ ಅಕ್ಕನ ಚರಿತ್ರೆ. ಇದನ್ನು ವಸ್ತುವನ್ನಾಗಿ ಮಾಡಿಕೊಂಡ ಕಾದಂಬರಿಕಾರರು ಅಂದಿನ ಸಮಾಜದ ಚಿತ್ರಣವನ್ನು ನೀಡಿಲ್ಲ. ಕೌಶಿಕ ರಾಜನನ್ನು ಉದಾತ್ತೀಕರಿಸುವ ಕಾಲ್ಪನಿಕ ಸನ್ನಿವೇಶವನ್ನು ಸೃಷ್ಟಿಸಿದ್ದಾರೆಯೇ ಹೊರತು ಆತನ ಸಹಜ ನಡವಳಿಕೆ ಹೇಗಿತ್ತು ಎಂಬುದರ ವಿವರ ಇಲ್ಲ. ಅಂದಿನ ಕಾಲದ ಮತಗಳ ಮೇಲಾಟದ ಚಿತ್ರಣವಿಲ್ಲ. ಈ ಯಾವ ಐತಿಹಾಸಿಕ ಅಂಶಗಳ ಮೇಲು ಈ ಕೃತಿಯು ಬೆಳಕು ಚೆಲ್ಲುವುದಿಲ್ಲ. ಇಷ್ಟೆಲ್ಲಾ ಮಿತಿಗಳಿದ್ದರೂ ಕೂಡ ಕದಳಿಯ ಕರ್ಪೂರ

ಒಂದು ಶ್ರೇಷ್ಠ ಕಲಾಕೃತಿ. ಆಧ್ಯಾತ್ಮಿಕ ವ್ಯಕ್ತಿಯನ್ನು ಕುರಿತು ಕಾದಂಬರಿಯನ್ನು ರಚನೆ ಮಾಡಿದರೂ ಅದು ಕಲಾತ್ಮಕತೆಯಿಂದ ಕೂಡಿದೆ. ಕಾಲ್ಪನಿಕತೆ ಕಾದಂಬರಿಯಲ್ಲಿ ಸುಳಿದರೂ, ಅವರು ನೈಜತೆಗೆ ಹೆಚ್ಚಿನ ಹೊತ್ತನ್ನು ನೀಡಿದ್ದಾರೆ. ಕಾದಂಬರಿಯ ರಚನೆಗೆ ಮುನ್ನ, ಶರಣರು ಬಾಳಿ ಬದುಕಿದ ಸ್ಥಳಗಳಿಗೆ ಭೇಟಿಕೊಟ್ಟು ಕೆಲಕಾಲ ಇದ್ದು ಚರಿತ್ರಾಂಶಗಳನ್ನು ಸಂಗ್ರಹಿಸಿ ಕಾದಂಬರಿಯ ರಚನೆಯನ್ನು ಮಾಡಿದ್ದಾರೆ. ಇದರಿಂದ ಇವರ ಕಾದಂಬರಿಯಲ್ಲಿ ವಾಸ್ತವಾಂಶ ಹೆಚ್ಚು ಕಂಡುಬರುತ್ತದೆ.

## ತರಂಗಿಣಿ :

ಈ ಕಾದಂಬರಿಯು ಕರ್ತೃ ಮಾತೆ ಮಹಾದೇವಿ. ಈಕೆ ಒಬ್ಬ ಸನ್ಯಾಸಿನಿ ಹಾಗೆಯೇ ವೀರಶೈವ ಧರ್ಮದ ಬಗ್ಗೆ ಅಪಾರ ಕಾಳಜಿಯುಳ್ಳವಳು. ಇವರು ಬರೆದಿರುವ ಕೃತಿಗಳೆಲ್ಲವು ಈ ಧರ್ಮಕ್ಕೆ ಸೇರಿದವುಗಳಾಗಿವೆ. ಸಾಹಿತಿಯ ವ್ಯಕ್ತಿತ್ವ ಮತ್ತು ಮನೋಧರ್ಮಗಳು ಸಾಹಿತ್ಯಕೃತಿಯ ಮೇಲೆ ಪ್ರಭಾವ ಬೀರುವುದು ಸಹಜವೇ. ಅಧ್ಯಾತ್ಮ ಜೀವಿಯಾಗಿ ಬಾಳಿ ಬದುಕಿದ ಅಕ್ಕನ ಜೀವನವನ್ನು ಕಟ್ಟಿಕೊಡಲು ಹೆಚ್ಚು ಸಮರ್ಥರಾಗಿದ್ದಾರೆ. ಕಾರಣ ಇಷ್ಟೇ. ಇವರು ಸನ್ಯಾಸಿಯಾಗಿ ಅಧ್ಯಾತ್ಮದತ್ತ ಒಲವು ತೋರಿದವರು ಇವರು. ಈಕೆ ಒಬ್ಬ ಹೆಣ್ಣಾಗಿ ಸನ್ಯಾಸಿನಿಯಾಗಿ ಅಕ್ಕನ ಅಂತರಂಗ ಭಾವಗಳಿಗೆ ಎಷ್ಟರಮಟ್ಟಿಗೆ ಕಲಾಸ್ಪರ್ಶವನ್ನು ಕೊಟ್ಟಿದ್ದಾರೆ ಎಂಬುದನ್ನು ತಿಳಿಯಬೇಕಾಗಿದೆ.

ಈ ಕಾದಂಬರಿಯಲ್ಲಿ ಸನ್ನಿವೇಶಗಳ ಚಿತ್ರಣ. ಸಂಭಾಷಣೆ, ಪಾತ್ರಗಳ ಬೆಳವಣಿಗೆ ಸೊಗಸಾಗಿ ಮೂಡಿಬಂದಿದೆ. ಅಕ್ಕನು ಬಾಲ್ಯದಲ್ಲಿ ಗುರುಗಳ ಜೊತೆ, ತಂದೆ ತಾಯಿಯರ ಜೊತೆ ನಡೆಸುವ ಸಂಭಾಷಣೆ ಚೆನ್ನಾಗಿ ಮೂಡಿ ಬಂದಿದೆ. ಅಕ್ಕನನ್ನು ಚಿತ್ರಿಸುವಾಗ ಆಕೆ ಪ್ರಗತಿಪರ ಮಹಿಳೆಯಂತೆ, ಜಾತಿ, ತಾರತಮ್ಯ ವಿರುದ್ಧ ಸಿಡಿದು ನಿಲ್ಲುವ ವ್ಯಕ್ತಿ. ಮೌಢ್ಯತೆಯ ವಿರುದ್ದ ಜ್ವಾಲೆಯ ಕಿಡಿ, ದಿಟ್ಟತನದ ಪ್ರತಿಮೆಯಾಗಿ ಚಿತ್ರಿಸಲು ಅಂತಹ ಸನ್ನಿವೇಶ ಸಂಭಾಷಣೆಗಳನ್ನು ನಿರ್ಮಾಣ ಮಾಡಿದ್ದಾರೆ. ಉದಾಹರಣೆಗೆ ಅಕ್ಕ ಲಿಂಗಧಾರಣೆಯ ಸಂದರ್ಭದಲ್ಲಿ ಆಕಸ್ಮಿಕವಾಗಿ ನಡೆದ ಮಾತುಕತೆಗಳನ್ನು ನೋಡಬಹುದು.

ಶಿವಮೂರ್ತಪ್ಪ : 'ಹೋಗಿದ್ದ ಕೆಲಸ ಗಂಡೋ ಹೆಣ್ಣೋ?'

ಮಗ ಹೇಳಿದ : 'ಗಂಡು.'

ಅಕ್ಕ : 'ದೊಡ್ಡಪ್ಪ, ಹಾಗಂದರೇನು?'

'ಹೋದ ಕೆಲಸ ಆಯ್ತೋ ಹೋಯ್ತೋ' ಎನ್ನಲು ಬಳಸುವ ಭಾಷೆ....

'ಸರಿ ಅಣ್ಣ ಹೇಳಿದ್ನಲ್ಲ. ಗಂಡು ಅಂತ, ಹಂಗೆ ಅಂದರೆ ...'

'ಗಂಡು ಅಂದರೆ ಗೆಲವು, ಹೆಣ್ಣು ಅಂದರೆ ಸೋಲು...'

'ಹೆಣ್ಣು ಎಂದರೆ ಸೋಲಿನ ಸಂಕೇತವೇ ದೊಡ್ಡಪ್ಪ...'

ಹೀಗೆ ಅಕ್ಕ ಮತ್ತು ಶಿವಮೂರ್ತಪ್ಪ ಸಂಭಾಷಣೆ ಮುಂದುವರಿತ್ತುದೆ, ಇಲ್ಲೆಲ್ಲ ಅಕ್ಕನ ಪ್ರತಿಕ್ರಿಯೆ ತೀಕ್ಷ್ಣವಾಗಿರುವುದನ್ನು ಗಮನಿಸಬಹುದು.

ಕಾದಂಬರಿಯು ಅಕ್ಕನ ವಚನಗಳಿಂದಲೇ ಆಕೆಯ ಜೀವನ ನಿರೂಪಿಸುವ ತಂತ್ರವನ್ನು ಬಳಸಿದ್ದಾರೆ. ಹಾಗೆಯೇ ಓಂಕಾರಶೆಟ್ಟಿಯ ಜೀವಂತ ಬಯಕೆಯನ್ನು ಮಗಳ ಮೂಲಕ ಸಾಧಿಸಿಕೊಳ್ಳುವ ತಂತ್ರಗಾರಿಕೆಯನ್ನು ಕಾದಂಬರಿಕಾರರು ಸೊಗಸಾಗಿ ರಚನೆಯನ್ನು ಮಾಡಿದ್ದಾರೆ. ಈ ಕಾದಂಬರಿಯನ್ನು ಆಧ್ಯಾತ್ಮಿಕ ಪಾತಳಯಲ್ಲೇ ಮುನ್ನೆಡೆಸುತ್ತಾರೆ. ಅಕ್ಕ ಧ್ಯಾನದಲ್ಲಿರುವಾಗ ಹುಲಿ ಬರುವ ಚಿತ್ರಣ, ಅಕ್ಕನ ಐಕ್ಯಗೊಳ್ಳುವ ಚಿತ್ರಣಗಳಲ್ಲಿ ಈ ನಿಲುವುಗಳನ್ನು ಗಮನಿಸಬಹುದು. ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಉಳಿದೆರಡು ಕಾದಂಬರಿಗಳಂತೆ ಪರಿಪೂರ್ಣತೆಯನ್ನು ಸಾಧಿಸಿದೆ. ಪಾತ್ರಗಳ ಬೆಳವಣಿಗೆಯನ್ನು ಈ ಕಾದಂಬರಿಯಲ್ಲಿ ನೋಡಬಹುದು. ಉದಾಹರಣೆಗೆ ಹೇಳುವುದಾದರೆ ವಿಶ್ವನಾಥ, ವಸಂತಕ, ಕೌಶಿಕ ಈ ಪಾತ್ರಗಳ ಸ್ಪಷ್ಟ ಬೆಳವಣಿಗೆ ಗೋಚರಿಸುತ್ತದೆ. ಈಗಾಗಲೇ ತಿಳಿಸಿದಂತೆ ಹೃದಯ ಮಿಡಿಯುವ ಸನ್ನಿವೇಶಗಳನ್ನು ನಿರ್ಮಾಣಮಾಡಿದ್ದಾರೆ,. ಅಕ್ಕ ಉಡುತಡಿಯಿಂದ ಹೊರಡುವ ಸಂದರ್ಭ. ಜೀವನೋಪಾಯಕ್ಕೆ ಭಿಕ್ಷೆ ಬೇಡುವ ಸಂದರ್ಭ, ಅಕ್ಕನನ್ನು ಸಮಾಜ ಹೀಯಾಳಿಸುವ ಸನ್ನಿವೇಶ, ಸ್ಮಶಾನದಲ್ಲಿ ವಾಸವಾಗಿರುವ ಪರಿಸ್ಥಿತಿಯ ಚಿತ್ರಣಗಳು ಕಲಾತ್ಮಕವಾಗಿಯೂ ಹೃದಯಋವನ್ನು ಕಲಕುವಂತೆಯೂ ಮೂಡಿನಿಂತಿದೆ. ಈ ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವ ಹಾಗೆ ಕಡೆದು ನಿಲ್ಲಿಸಿದ್ದಾಳೆ ಕಾದಂಬರಿಕಾರ್ತಿ.

ಸಂಭಾಷಣೆಗಳು ಸೊಗಸಾಗಿ ಮೂಡಿಬಂದಿದೆ ಎಂದು ಹೇಳಿದರೂ ಕೆಲವೊಂದು ಸಾರಿ ಮಾತಿಗೆ ಖಚಿತತೆ ತರಲು ಉದಾಹರಣೆಗಳೊಂದಿಗೆ ಸಂಭಾಷಣೆಯನ್ನು ಹಿಂಜಿ ಹಿಂಜಿ ಬೆಳೆಸುತ್ತಾರೆ. ಇಂತಹ ಸುದೀರ್ಘ ಸಂಭಾಷಣೆಗಳು, ಸಂಭಾಷಣೆಯ ಪುನರುಕ್ತಿಗಳು ಕಾದಂಬರಿಯ ಗಾತ್ರವನ್ನು ಹೆಚ್ಚಿಸಿದೆ ಎನಿಸುತ್ತದೆ. ಈ ಕಾದಂಬರಿಯಲ್ಲಿ ಅಕ್ಕ ಯಾವ ಯಾವ ಸ್ಥಳಗಳಿಗೆ ಹೋಗುತ್ತಾಳೋ ಆ ಸ್ಥಳ ಅಥವಾ ಆ ಪ್ರದೇಶದ ಜನರೆಲ್ಲಾ ಸಂಪೂರ್ಣ ಬದಲಾವಣೆ ಹೊಂದುತ್ತಾರೆ. ಜೊತೆಗೆ ಅಭಿಮಾನಿಗಳ ಸಮೂಹ

ರಚನೆಗೋಳ್ಳುತ್ತದೆಂಬ ಬಾಲಿಶವಾದ ಸನ್ನಿವೇಶಗಳ ಚಿತ್ರಣ ಬರುತ್ತದೆ. ಒಂದೊಂದು ಸಾರಿ ವಿವರಣೆಗಳು ಅತೀ ಎನಿಸುವಷ್ಟು ವಿವರಗಳನ್ನು ಕೊಟ್ಟಿದ್ದಾರೆ. ಉದಾಹರಣೆಗೆ ವಚನಗಳನ್ನು ವಿಶ್ಲೇಷಣೆ ಮಾಡುವುದು. ಲಿಂಗದ ಮಹಿಮೆಯನ್ನು ಸಾರಿ ಹೇಳುವ ಕಡೆಗಳಲ್ಲಿ ಇದನ್ನು ಕಾಣಬಹುದು. ಹಾಗೆಯೇ ಈ ಕಾದಂಬರಿ ಕೆಲವೊಂದು ಸಲ ಕಥಾವಸ್ತುವನ್ನು ಬಿಟ್ಟು ಬಹುದೂರ ಸಾಗುತ್ತದೆ. ದ್ವೇಷದ ಜ್ವಾಲೆ, ಪ್ರೇಮಜಲ ಎಂಬ ಅಧ್ಯಾಯ ಓದುಗನ ಕೇಂದ್ರ ಪ್ರಜ್ಞೆಯಿಂದ ಬಲು ದೂರ ಎಳೆದೊಯ್ಯುತ್ತದೆ.

ಈ ಎಲ್ಲಾ ಮಿತಿಗಳಿದ್ದಾಗಿಯೂ ಕೂಡ ಇದೊಂದು ಉತ್ತಮ ಕಲಾಕೃತಿ. ಲೋಪದೋಷಗಳು ಕಂಡುಬಂದರೂ ಅದು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲ. ಈ ಕಾದಂಬರಿಯಲ್ಲಿ ಅಕ್ಕನ ಜೀವನದ ಪ್ರತಿ ಘಟನೆಯನ್ನು ದೀರ್ಘವಾಗಿಯೇ ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿ ಅಕ್ಕನ ಜೀವನ ಚರಿತ್ರೆಯನ್ನು ಒಂದು ಸಾಹಿತ್ಯ ಪ್ರಕಾರವಾಗಿ ತೆಗೆದುಕೊಂಡಾಗ ಸಾಹಿತ್ಯದ ದೃಷ್ಟಿಯಿಂದ ಕೆಲವೊಮ್ಮೆ ಮುಗ್ಗರಿಸಿದರೂ ಅದರಲ್ಲಿ ಬರುವ ವಿವರವಾದ ಘಟನೆಗಳು, ರೋಮಾಂಚನ ಸನ್ನಿವೇಶಗಳು, ಲೇಖಕಿಯ ಸುಂದರ ಕಲ್ಪನೆಗಳು ಸೊಗಸಾಗಿದೆ. ಈ ಕಾದಂಬರಿಯಲ್ಲಿ ಅಕ್ಕನ ಹನ್ನೆರಡನೆಯ ಶತಮಾನದ ಪರಿಸರ ಮತ್ತು ಲೇಖಕಿಯ ಸಮಕಾಲೀನ ಸಮಾಜವನ್ನು ಬಿಂಬಿಸುತ್ತದೆ. ಕಾದಂಬರಿಯ ಉದ್ದಕ್ಕೂ ಸಮಾಜದ ಉದ್ಧಾರದ ಕಾಳಜಿಯಿದೆ. ಇದು ಲೇಖಕಿಯ ಮನೋಧರ್ಮವನ್ನು ಬಿಂಬಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಮೂರು ಕಾದಂಬರಿಳು ಒಂದೇ ವಸ್ತುವನ್ನು ಆಯ್ಕೆ ಮಾಡಿಕೊಂಡಿದೆ. ವಸ್ತು ಒಂದೇ ಆದರೂ ಕಾದಂಬರಿಗಳಲ್ಲಿ ಮೂಡಿ ಬಂದಿರುವ ಸನ್ನಿವೇಶ. ಸಂಭಾಷಣೆ, ಉಪಮೆ, ಪಾತ್ರಗಳು, ಘಟನೆಗಳು ಭಿನ್ನ ಭಿನ್ನವಾಗಿದೆ. ಈ ಮೂರು ಕಾದಂಬರಿಗಳನ್ನು ಒಟ್ಟಾಗಿ ನೋಡಿದಾಗ ಕದಳಿಯ ಕರ್ಪೂರ ಮತ್ತು ತರಂಗಿಣಿಗಳಲ್ಲಿ ಸಾಮ್ಯತೆ ಇದೆ. ಗಿರಿಯ ನವಿಲು ಕಾದಂಬರಿ ಈ ಎರಡರಿಂದ ಬೇರೆಯಾಗಿ ನಿಲ್ಲುತ್ತದೆ. ಅಕ್ಕ, ಪರಿಪೂರ್ಣ ವ್ಯಕ್ತಿತ್ವ ನಿರೂಪಣೆಯಲ್ಲಿ ಈ ಕಾದಂಬರಿಗಳು ಯಶಸ್ವಿಯಾಗಿದೆ. ಕಥಾವಸ್ತುವನ್ನು ಮೂರು ಕಾದಂಬರಿಗಳ ಸಮರ್ಥವಾಗಿ ಬಳಕೆ ಮಾಡಿಕೊಂಡಿದೆ. ಧರ್ಮದ ದೃಷ್ಟಿಯಿಂದ ನೋಡಿದಾಗ ಕದಳಿಯ ಕರ್ಪೂರ ಇತರ ಕಾದಂಬರಿಗಳಿಗಿಂತ ಭಿನ್ನವಾಗಿದೆ..

~*~*~*~*~*

## ಅಧ್ಯಾಯ-೭

# ಕಾದಂಬರಿಗಳ ತೌಲನಿಕ ನೋಟ

ಅಕ್ಕನನ್ನು ಕುರಿತು ಅನೇಕ ಪ್ರಕಾರಗಳಲ್ಲಿ ಅನೇಕ ಕೃತಿಗಳು ಬಂದಿವೆ. ಈ ಅಧ್ಯಯನದಲ್ಲಿ ಮೂರು ಕಾದಂಬರಿಗಳನ್ನು ಆರಿಸಿಕೊಳ್ಳಲಾಗಿದೆ. ಅಕ್ಕನನ್ನು ಕುರಿತು ನಮಗೆ ತಿಳಿದಿರುವಂತೆ ಇಲ್ಲಿಯವರೆಗೆ ಮೂರು ಕಾದಂಬರಿಗಳು ಮಾತ್ರ ಪ್ರಕಟಗೊಂಡಿದೆ. ಅವುಗಳೆಂದರೆ ೧೯೫೬ ರಲ್ಲಿ ಪ್ರಕಟವಾದ ಬಸವರಾಜಕಟ್ಟೀಮನಿಯವರ 'ಗಿರಿಯನವಿಲು', ೧೯೬೩ ರಲ್ಲಿ ಪ್ರಕಟಗೊಂಡ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರ 'ಕದಳಿಯಕರ್ಪೂರ', ೧೯೭೫ರಲ್ಲಿ ಹೊರ ಬಂದ ಮಾತೆ ಮಹಾದೇವಿಯರ 'ತರಂಗಿಣಿ'. ಈ ಕೃತಿಗಳು ಬೇರೆ ಬೇರೆ ದಶಕಗಳಲ್ಲಿ ಪ್ರಕಟಗೊಂಡಂತಹುವುಗಳಾಗಿವೆ. ಒಂದೇ ವಸ್ತುವನ್ನು ಆಯ್ಕೆಮಾಡಿಕೊಂಡು ಲೇಖಕರು ಕಾದಂಬರಿಯ ಪ್ರಕಾರದಲ್ಲಿಯೇ ತಮ್ಮ ಕೃತಿಗಳನ್ನು ರಚಿಸಿರುವುದು ಸ್ವಾರಸ್ಯಕರ. ಆದ್ದರಿಂದ ಈ ವಸ್ತುವಿನ ಮೂಲ ಆಕರ ಯಾವುದು ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಹಾಗೆಯೇ ಒಂದರಿಂದ ಮತ್ತೊಂದು ಪ್ರೇರಣೆ ಪಡೆದಿದೆಯೇ ಎಂಬುದರ ಆಲೋಚನೆ ಉಂಟಾಗುತ್ತದೆ. ಈ ಎಲ್ಲಾ ಅಂಶಗಳ ಮೇಲೆ ಬೆಳಕು ಚೆಲ್ಲುವ ಒಂದು ಕಿರು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗುತ್ತಿದೆ.

ಅಕ್ಕನ ಜೀವನ ಚರಿತ್ರೆಯು ಸಾಕಷ್ಟು ಸುಧೀರ್ಘವಾಗಿದೆ. ಹಾಗೆಯೇ ನಮ್ಮ ಕಾದಂಬರಿಕಾರರು ಅವಳ ಬದುಕನ್ನು ವಿಸ್ತಾರವಾಗಿಯೇ ಚಿತ್ರಿಸಿದ್ದಾರೆ. ಅಕ್ಕನ ಬಗ್ಗೆ ನಮಗೆ ಐತಿಹಾಸಿಕ ಆಧಾರ ಸಾಕಷ್ಟು ಉಪಲಬ್ದವಿಲ್ಲ. ನಮಗೆ ಲಭ್ಯವಿರುವುದು ಕವಿಗಳ ಮತ್ತು ಅಕ್ಕನ ವಚನಗಳನ್ನು ಮಾತ್ರ ಇವುಗಳನ್ನು ಆಧಾರವಾಗಿಟ್ಟುಕೊಂಡು ವಿದ್ವಾಂಸರು ಅವಳ ಚರಿತ್ರೆಯನ್ನು ನಿರ್ಮಿಸುವ ಪ್ರಯತ್ನ ಮಾಡಿದ್ದಾರೆ/ ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡ ನಮ್ಮ ಸಾಹಿತಿಗಳು ಕಾದಂಬರಿಯ ರಚನೆಯನ್ನು ಮಾಡಿದ್ದಾರೆ. ಹೀಗೆ ರಚಿಸುವಾಗ ಆಯಾಯ ಲೇಖಕರ ಮನೋಧರ್ಮಕ್ಕೆ ಅನುಸಾರವಾಗಿ ಕೆಲವು ಮಾರ್ಪಾಡುಗಳು ಆಗುವುದು ಸಹಜ. ಐತಿಹಾಸಿಕ ವ್ಯಕ್ತಿಯನ್ನು ಕಲಾಕೃತಿಗೆ ತಂದಾಗ ಆಗುವ ವ್ಯತ್ಯಾಸಗಳು ಉಂಟಾಗುತ್ತವೆ) ಇಂತಹ ವ್ಯತ್ಯಾಸ ಮಾರ್ಪಾಡುಗಳನ್ನು ಗುರುತಿಸಿ ಅವುಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ, ಯಾವುದು ಸರಿ ಯಾವುದು ತಪ್ಪು ಎಂಬುದರ ವಿಶ್ಲೇಷಣೆ ಮಾಡಬೇಕಾಗುತ್ತದೆ.

ಕಾದಂಬರಿಕಾರರು ಭಿನ್ನ ದೃಷ್ಟಿಕೋನ ಉಳ್ಳವರಾಗಿದ್ದಾರೆ. ಇವರು ಯಾವ ರೀತಿಯಲ್ಲಿ ಕಾದಂಬರಿಯಲ್ಲಿನ ಪಾತ್ರಗಳನ್ನು, ಸನ್ನಿವೇಶಗಳನ್ನು ಬೆಳೆಸಿಕೊಂಡು ಹೋಗಿದ್ದಾರೆ ಎಂಬುದನ್ನು ಅಧ್ಯಯನ ಮಾಡಲು ಕೆಲವು ವಿಭಾಗ ಮಾಡಿಕೊಳ್ಳಬೇಕಾದುದು ಅನಿವಾರ್ಯವಾಗಿದೆ. ಅಕ್ಕನ ಬಾಲ್ಯ, ತಂದೆ-ತಾಯಿ ಯೌವ್ವನ, ಐಕ್ಯ ಮೊದಲಾದ ಅನೇಕ ಅಂಶಗಳನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡಿ ತೌಲನಿಕವಾಗಿ ನೋಡಲಾಗಿದೆ. ಇದರ ಜೊತೆಗೆ ಕಾದಂಬರಿಕಾರರು ಅಕ್ಕನ ಯಾವ ಐತಿಹಾಸಿಕ ಕೃತಿಯಿಂದ ಪ್ರೇರಿತರಾಗಿದ್ದಾರೆ. ಅವರ ಸ್ವೋಪಜ್ಞತೆ ಏನು ಎಂಬುದು ತಿಳಿಯುತ್ತದೆ.

## ಜನ್ಮಸ್ಥಳ, ತಂದೆ-ತಾಯಿ

ಅಕ್ಕನನ್ನು ಕುರಿತಾದ ಈ ಮೂರು ಕಾದಂಬರಿಗಳಲ್ಲಿ ಈಕೆಯ ಜನ್ಮಸ್ಥಳ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಗೆ ಹತ್ತಿರದಲ್ಲಿರುವ 'ಉಡುತಡಿ' ಎಂದು ಚಿತ್ರಿಸಿದ್ದಾರೆ. ಇದರಿಂದ ಗುಲ್ಬರ್ಗಾ ಜಿಲ್ಲೆಯ ಮಹಾಗಾವೆಯೇ ಮೊದಲಿನ ಉಡುತಡಿ ಎಂಬ ಅಭಿಪ್ರಾಯವನ್ನು ಇವರು ಕೊಟ್ಟಿದ್ದಾರೆ. ಅಕ್ಕನ ಜನ್ಮಸ್ಥಳ ಉಡುತಡಿ ಎಂಬುದು ಐತಿಹಾಸಿಕವಾಗಿಯೂ ಸತ್ಯಸಂಗತಿಯಾಗಿದೆ.

ಇನ್ನು ಇವಳ ತಂದೆ-ತಾಯಿಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರುವುದನ್ನು ಈ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ. ಕಟ್ಟೀಮನಿಯವರು ಚಾಮರಸನ ಅಭಿಪ್ರಾಯವನ್ನು ಆಧರಿಸಿ ಅವಳ ತಂದೆ ನಿರ್ಮಲಶೆಟ್ಟಿ, ತಾಯಿ ಸುಮತಿದೇವಿ ಎಂದು ಹೇಳಿದ್ದಾರೆ. ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಮತ್ತು ಮಾತೆ ಮಹಾದೇವಿಯವರು ರಾಚಕವಿಯನ್ನು ಅನುಸರಿಸಿ ತಂದೆ ಓಂಕಾರಶೆಟ್ಟಿ, ತಾಯಿ ಲಿಂಗಮ್ಮ ಎಂದು ಹೇಳಿದ್ದಾರೆ. ಈ ಮೂರು ಕಾದಂಬರಿಗಳಲ್ಲಿ ಗಮನಿಸಬಹುದಾದ ಮುಖ್ಯ ಅಂಶವೆಂದರೆ ಮಹಾದೇವಿಯ ತಂದೆ-ತಾಯಿಯವರ ವ್ಯಕ್ತಿತ್ವದ ವಿಚಾರದಲ್ಲಿ ಯಾವುದೇ ಭಿನ್ನಾಭಿಪ್ರಾಯಗಳಿಲ್ಲದೆ ಇರುವುದು. ಅಂದರೆ ಇವರು ಸಕಲ ಸೌಭಾಗ್ಯವನ್ನು ಪಡೆದ ಸಾತ್ವಿಕ ಜೀವಿಗಳು, ಗುರುಲಿಂಗ ಜಂಗಮಕ್ಕಾಗಿ ತಮ್ಮ ಸೇವೆಯನ್ನು ಮುಡುಪಾಗಿಟ್ಟ ಸದ್ಭಕ್ತರು ಎನ್ನುವುದರಲ್ಲಿ ಒಮ್ಮತವಾದ ಅಭಿಪ್ರಾಯವಿರುವುದನ್ನು ಕಾಣಬಹುದು.

ಈ ಮೂರು ಕಾದಂಬರಿಗಳಲ್ಲಿ ಅನೇಕ ವರ್ಷಗಳವರೆಗೆ ಮಕ್ಕಳಾಗದೇ ಇರುವ ದಂಪತಿಗಳಿಬ್ಬರು ಮಕ್ಕಳಿಗಾಗಿ ಪರಿತಪಿಸುವ ವಿಷಯ ಹೆಚ್ಚು ಕಡಿಮೆ ಒಂದೇ ರೀತಿಯಾಗಿ

ಬರುತ್ತದೆ. 'ಗಿರಿಯ ನವಿಲು' ಕಾದಂಬರಿಯಲ್ಲಿ ನಿರ್ಮಲಶೆಟ್ಟಿ ಇದೇ ಚಿಂತೆಯಲ್ಲಿ ಮುಳುಗಿ ಅಂಗಡಿಯಲ್ಲಿ ನಿಮಿತ್ತಮಾತ್ರನಾಗಿ ಕುಳಿತಿರುತ್ತಾನೆ. ಆ ಸಮಯದಲ್ಲಿ ಶ್ರೀಶೈಲದಿಂದ ಜಂಗಮನೋರ್ವನು ಬಂದು ಬಾಗಿಲ ಮುಂದೆ ನಿಲ್ಲುತ್ತಾನೆ. ತಾನು ಬಂದುದನ್ನು ಗಮನಿಸಿದೇ ಈ ಭಕ್ತ ಕುಳಿತನಲ್ಲ ಎಂದು ಕೋಪಿಸಿಕೊಳ್ಳುತ್ತಾನೆ. ಆ ಜಂಗಮನನ್ನು ಕ್ಷಮೆಯಾಚಿಸಿ, ನಿರ್ಮಲ ಸುಮತಿಯರು ಆತನಿಗೆ ಉಪಚರಿಸುತ್ತಾರೆ. ಇದರಿಂದ ತೃಪ್ತನಾದ ಆತ ಇವರಿಬ್ಬರ ಚಿಂತೆಗೆ ಕಾರಣ ಕಂಡುಕೊಂಡು ಶ್ರೀಶೈಲದ ಮಲ್ಲಿಕಾರ್ಜುನನ ಪವಿತ್ರ ಭಸ್ಮವನ್ನು ನೀಡುತ್ತಾನೆ. ಇದನ್ನು ಪ್ರಸಾದಕ್ಕೆ ಮುಂಚೆ ಪ್ರತಿರಾತ್ರಿ ಒಂದು ವಾರದವರೆಗೆ ಪೂರ್ಣ ಭಕ್ತಿಯಿಂದ ಸೇವಿಸು ಎಂದು ಸುಮತಿಗೆ ಸೂಚನೆಕೊಡುತ್ತಾನೆ. ಆ ರಾತ್ರಿ ಅವಳು ಭಕ್ತಿಯಿಂದ ಭಸ್ಮದಲ್ಲಿಯ ಸ್ವಲ್ಪಭಾಗವನ್ನು ಸೇವಿಸಿ ಇದೇ ವಿಷಯ ಕುರಿತು ಪತಿಯೊಂದಿಗೆ ಮಾತನಾಡುತ್ತಾ ಮಲಗುತ್ತಾಳೆ. ಅಂದೇ ಬೆಳಗು ಮುಂಜಾವಿನಲ್ಲಿ ಕನಸ್ಸೊಂದನ್ನು ಕಾಣುತ್ತಾಳೆ.

ಈ ಕಾದಂಬರಿಯು ಹರಿಹರನ 'ಮಹಾದೇವಿಯಕ್ಕನ ರಗಳೆ' ಯನ್ನು ಅನುಸರಿಸಿದೆ. ಇದು ತಿಳಿದಿರುವ ಸಂಗತಿ. ಹರಿಹರ ತನ್ನ ಕಾವ್ಯದಲ್ಲಿ ಹೇಳುವ ಕೈಲಾಸದಲ್ಲಿನ ಸತ್ಯಘಟನೆ ಸನ್ನಿವೇಶವನ್ನು ಯಥಾವತ್ತಾಗಿ ಬಸವರಾಜ ಕಟ್ಟೀಮನಿಯವರು ಕನಸಿನ ರೂಪದಲ್ಲಿ ಬಳಸಿಕೊಂಡಿದ್ದಾರೆ. ಪಾರ್ವತಿಯ ಆಶೀರ್ವಾದದ ಪುಷ್ಪವನ್ನು ಸುಮತಿ ಪಡೆಯುವ ಸನ್ನಿವೇಶವನ್ನು ಹರಿಹರನಂತೆಯೇ ವಿವರಿಸಿದ್ದಾರೆ. ಅತೃಪ್ತ ಬಯಕೆಗಳು ಕನಸಿನಲ್ಲಿ ಕಾಣಬಹುದು ಎಂಬ ಸತ್ಯಕ್ಕೆ ಲೇಖಕರ ಈ ಕಲ್ಪನೆ ಸಮೀಪವಾಗಿದೆ. ಅಂದರೆ ಪಾರ್ವತಿಯ ಶಾಪದಿಂದ ರುದ್ರಕನ್ನಿಕೆ ಅಕ್ಕಮಹಾದೇವಿಯಾಗಲು ಭೂಮಿಗೆ ಬಂದ ವಿಷಯವನ್ನು ಲೇಖಕರು ಸುಮತಿಯ ಕನಸಿನಲ್ಲಿ ತೋರಿರುವುದು ಔಚಿತ್ಯಪೂರ್ಣವಾಗಿದೆ. ಈ ಕಾದಂಬರಿಯಲ್ಲಿ ಬರುವ ನಿರ್ಮಲನ ಮಾತುಗಳಲ್ಲಿ ಅಂದರೆ ಶ್ರೀಶೈಲ ಗಿರಿಯಲ್ಲಿ ಆಗುವ ಔಷಧ ಮೂಲಿಕೆಗಳಿಂದ ಯೋಗಿಗಳು ಭಸ್ಮವನ್ನು ತಯಾರಿಸುತ್ತಾರೆ. ಈ ಜಂಗಮನನ್ನು ಸುಮತಿ ಸಾಕ್ಷಾತ್ ಮಲ್ಲಿಕಾರ್ಜುನನ ಪ್ರತಿರೂಪದಂತೆ ಭಾವಿಸುತ್ತಾಳೆ. ಜಂಗಮ ಹೇಳುವ ಭಸ್ಮದ ವಿಷಯದಲ್ಲಿ ಹೇಳುವ ಮಾತುಗಳು ಲೇಖಕರ ವೈಜ್ಞಾನಿಕ ಮನೋಭಾವ ಕಂಡುಬರುತ್ತದೆ.

ಕದಳಿಯ ಕರ್ಪೂರ ಕಾದಂಬರಿಯಲ್ಲಿ ಭಸ್ಮದ ಪ್ರಸ್ತಾಪವಿಲ್ಲ. ಲೇಖಕರು ಕನಸಿನ ವಿಷಯದಲ್ಲೂ ಹರಿಹರನನ್ನು ಅನುಸರಿಸಿಲ್ಲ. ಓಂಕಾರಶೆಟ್ಟಿ ಮತ್ತು ಲಿಂಗಮ್ಮರಿಗೆ

ಗುರುಲಿಂಗ ಜಂಗಮರಲ್ಲಿ ಅನನ್ಯ ಭಕ್ತಿ ಗೌರವಗಳನ್ನು ಇಟ್ಟುಕೊಂಡ ಪರಮಶಿವಭಕ್ತರು. ಒಮ್ಮೆ ಇವರು ಮಠಕ್ಕೆ ಹೋದಾಗ ಅವರ ಚಿಂತೆಯ ಕಾರಣವನ್ನು ತಿಳಿದ ಗುರುಗಳೇ ಏಕೈಕ ನಿಷ್ಠೆಯಿಂದ ನೀವು ಭಕ್ತಿಯನ್ನು ಮುಂದುವರೆಸಿದರೆ, ನಿಮ್ಮ ಮನೆ ಮನ ಮನುಕುಲವನ್ನು ಉದ್ಧರಿಸುವ, ಬೆಳಗುವ ಮಗುವಾದೀತು ಎಂದು ಹರಸುತ್ತಾನೆ. ಈ ನಿಮ್ಮ ಮಾತೇ ನಮಗೆ ವರವಾಗಲಿ ಎಂದು ಲಿಂಗಮ್ಮ ಆಶಿಸುತ್ತಾಳೆ. ಆ ರಾತ್ರಿಯೊಂದು ಕನಸು ಕಾಣುತ್ತಾಳೆ. ಬಿಳಿ ಪತ್ತಲವನ್ನುಟ್ಟ ಸರ್ವಲಂಕಾರ ಭೂಷಿತೆಯಾದ ಜಗನ್ಮಾತೆ ಆ ರಾತ್ರಿ ಲಿಂಗಮ್ಮನ ಮನೆಗೆ ಬರುತ್ತಾಳೆ. ಅವಳು ದೃಷ್ಟಿಗೆ ದೃಷ್ಟಿ ತಾಗಿಸಿ ನೋಡಿದಂತೆಯೇ ಲಿಂಗಮ್ಮನಿಗೆ ಈ ಭೂಮಂಡಲದಿಂದ ಮೇಲೆ ತೇಲಿ ಹೋದಂತಹ ಅನುಭವವಾಗುತ್ತದೆ. ಹೆದರಿದ ಆಕೆ ಚೀರಿದೊಡನೆ ಆ ದೇವಿ ಇನ್ನೂ ಸಮೀಪ ಬಂದು ಮುಟ್ಟುತ್ತಾಳೆ. ಅಲೌಕಿಕವಾದ ಅನುಭವದೊಂದಿಗೆ ಲಿಂಗಮ್ಮ ಪ್ರಶಾಂತವಾದ ಕ್ಷೀರಸಾಗರದೊಂದಿಗೆ ನಿಲ್ಲುತ್ತಾಳೆ. ಅದೇ ಕ್ಷಣದಲ್ಲಿ ಬೆಳಕಿನ ಮೊತ್ತವೊಂದು ಕೂಡಿ ಮೂರ್ತಿಯಾಗಿ ಆ ಜಗನ್ಮಾತೆಯ ಕೈ ಸೇರಿತು. ಲಿಂಗಮ್ಮನ ಕೈಗೆ ಈ ಮೂರ್ತಿಯನ್ನು ಕೊಡುತ್ತಾ ದೇವಿ ಹೀಗೆ ಹೇಳುತ್ತಾಳೆ. 'ಇದು ನನ್ನ ಶಕ್ತಿಯ ಒಂದು ಮುಖ, ಹೆಣ್ಣುತನದ ಸಾರ್ಥಕತೆಯನ್ನು ಸಾರುವ ಸಾತ್ವಿಕಶಕ್ತಿ, ನನ್ನ ಮಾಯಾಶಕ್ತಿಯ ಮುಖದಲ್ಲಿಯೇ ಮಗ್ನವಾದ ಜಗತ್ತಿಗೆ ಇದೊಂದು ಉಜ್ವಲ ಸೂರ್ಯನಂತೆ ಕಂಗೊಳಿಸಿ, ನನ್ನ ಶಕ್ತಿಯ ಸಾರ್ಥಕತೆಯನ್ನು ಮಾಡಿಕೊಡಲಿ, ಅದಕ್ಕೆ ನೀನು ನಿಮಿತ್ತ ಕಾರಣಳಾಗು' ಎಂದು ಹೇಳಿ ಆಶೀರ್ವದಿಸುತ್ತಾಳೆ.

ಒಟ್ಟಾರೆ ಲೇಖಕರ ದೃಷ್ಟಿಯಲ್ಲಿ ಪಾರ್ವತಿಯ ಪ್ರತಿರೂಪವೇ ಅಕ್ಕ. ಈ ಜಗತ್ತಿನ ಚರಾಚರವಾದ ವಸ್ತುಗಳ ಚಲನೆಯ ಹಿಂದೆ ಯಾವುದೋ ಒಂದು ದಿವ್ಯ ಶಕ್ತಿ ಇದೆ ಎಂಬ ಕಲ್ಪನೆಯನ್ನು ಅವಲಂಬಿಸಿ ತೀರಾ ವಾಸ್ತವವೂ ಅಲ್ಲದೆ, ತೀರಾ ಅಲೌಕಿಕವೂ ಅಲ್ಲದ, ರೀತಿಯಲ್ಲಿ ಅಕ್ಕನ ಜನನದ ಹಿನ್ನೆಲೆಯನ್ನು ಬಹುಜನರು ಒಪ್ಪುವಂತೆ ಕಲ್ಪಿಸಿ ಕೊಂಡಿದ್ದಾರೆ.

'ತರಂಗಿಣಿ' ಕಾದಂಬರಿಯಲ್ಲಿ ಈ ಎರಡು ಕಾದಂಬರಿಗಳಿಗಿಂತ ಸ್ವಲ್ಪ ಭಿನ್ನವಾದ ವಿಷಯದ ನಿರೂಪಣೆ ಬರುತ್ತದೆ. ದಂಪತಿಗಳಿಬ್ಬರು ಮಠಕ್ಕೆ ಹೋದಾಗ ಮಾತೃವಾತ್ಸಲ್ಯದ ಬಯಕೆ ತೀರದೆ ಹೋದ ಲಿಂಗಮ್ಮ ಗುರುಗಳಲ್ಲಿ ಪ್ರಸ್ತಾಪಿಸಿದಾಗ ಶಾರೀರಿಕ ದೋಷ ಏನೂ ಇಲ್ಲವಾದರೆ, ಕರ್ಮಬಂಧನದ ತೊಡಕಿರಬಹುದೆಂದು ಹೇಳಿ ಅವರೀರ್ವರ ಸಲುವಾಗಿ ದೈವಸಂಕಲ್ಪ ಮಾಡುತ್ತಾನೆಂದು ಒಂದು ನಿಯಮ ಹೇಳುತ್ತಾರೆ. ಲಿಂಗಮ್ಮ ಗುರುಗಳ ಷರತ್ತಿಗೆ ಒಪ್ಪುತ್ತಾಳೆ. ಗುರುಗಳ ಅಣತಿಯಂತೆ ಮರುದಿನ ಸೂರ್ಯೋದಯಕ್ಕೆ

ಮುಂಚೆ ಮಠದಲ್ಲಿಯ ಪೂಜಾ ಗೃಹಕ್ಕೆ ದಂಪತಿಗಳಿಬ್ಬರು ಬರುತ್ತಾರೆ. ಗುರುಲಿಂಗದೇವರು ಇಷ್ಟಲಿಂಗಪೂಜೆಯಲ್ಲಿ ತೊಡಗಿ, ಆ ಇಷ್ಟಲಿಂಗದಿಂದ ಬೆಳಕೊಂದು ಉದಯಿಸಿ ಅದು ಹಿರಿದಾಗಿ ವಿಶ್ವವನ್ನೆಲ್ಲಾ ವ್ಯಾಪಿಸುತ್ತದೆ. ಮತ್ತೆ ಕಿರಿದಾಗಿ ಕಲ್ಲುಸಕ್ಕರೆಯಲ್ಲಿ ಲೀನವಾಗುತ್ತದೆ. ಗುರುಗಳು ಕೊಟ್ಟ ಆ ಕಲ್ಲು ಸಕ್ಕರೆಯನ್ನು ಸೇವಿಸಿದಂತೆಯೇ ಲಿಂಗಮ್ಮನಿಗೆ ಅಲೌಕಿಕ ಅನುಭವವಾಗುತ್ತದೆ.

ಹಿಂದಿನ ದಿನ ತಾನು ಈ ರೀತಿಯ ಕನಸೊಂದನ್ನು ಕಂಡುದಾಗಿ ಆಕೆಯ ಗುರುಗಳಿಗೆ ಹೇಳುತ್ತಾರೆ. ಪತಿ ಸಮೇತ ಲಿಂಗಮ್ಮ ರಜತಗಿರಿಗೆ ಹೋದಳಂತೆ. ಶಿವನು ಅಲ್ಲಿ ಜ್ಞಾನಮುದ್ರೆಯಲ್ಲಿ ಇದ್ದನು. ಗುರುಗಳು ಸಹ ಅಲ್ಲಿ ತಪಸ್ಸು ಮಾಡುತ್ತಿದ್ದರು. ಗುರುಗಳ ಉತ್ಕಟ ಕರೆಗೆ ಮಣಿದು, ಶಿವ ಕಣ್ಣು ತೆರೆದ. ಜಡೆಯಲ್ಲಿಯ ಗಂಗೆ ಜುಳು ಜುಳು ಹರಿಯಲು ಆರಂಭಿಸಿದಾಗ ಶಿವನ ಜಡೆಯಲ್ಲಿದ್ದ ಏಳು ಸುತ್ತಿನ ದುಂಡು ಮಲ್ಲಿಗೆ ಅದರಲ್ಲಿ ತೇಲಿ ಬಂದಿತು. ಅದನ್ನು ಎತ್ತಿ ಲಿಂಗಮ್ಮ ಉಡಿಯಲ್ಲಿ ಹಾಕಿಕೊಂಡು ಆನಂದಿಸುತ್ತಿದ್ದಂತೆಯೇ ಮಹದೇವ ಅದನ್ನು ಬೇಡುತ್ತಾನೆ. ಲಿಂಗಮ್ಮ ಅದು ನನಗಿರಲಿ ಎಂದು ಅಂಗಲಾಚುತ್ತಾಳೆ. ಆಗ ಶಿವನು 'ನಾನು ಕೊಟ್ಟದನ್ನು ನನಗೇ ಕೊಡಲಾರೆಯಾ? ಇವರೂ ಸಹ ಶಿವನ ಮೀಸಲ ಹೂವನ್ನು ಅವನಿಗೆ ಕೊಡು' ಎಂದರು ನೀವು ಸಹ ಹಾಗೆ ಹೇಳಿದಿರಿ ಎಂದು ಹೇಳಿದ ಲಿಂಗಮ್ಮ ವಿವರಣೆಯನ್ನು ಕೇಳಿದ ಗುರುಗಳು 'ಆಕೆ ಕಾರಣಿಕ ಕನ್ಯೆ' ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ.

ಮತ್ತೊಂದು ದಿನ ರಾತ್ರಿ ಲಿಂಗಮ್ಮ ಹಾಸಿಗೆ ಮೇಲೆ ಒರಗಿ ಕಣ್ಣುಮುಚ್ಚಿ ಧ್ಯಾನಿಸುತ್ತಿರುತ್ತಾಳೆ. ಅಕಸ್ಮಾತ್ ಒಮ್ಮೆ ಕಣ್ಣು ತೆರೆದಾಗ ಕಂಬದ ಮೇಲಿರುವ ದೀಪದಿಂದ ಕಿಡಿಯೊಂದು ಹಾರಿ ಸುಂದರ ಹೆಣ್ಣು ಮಗುವಾಗಿ ಲಿಂಗಮ್ಮನ ಗರ್ಭದೊಳಗೆ ಅಡಗಿದಂತಾಯಿತು ಎಂದು ಹೇಳುವ ಸಂದರ್ಭದಲ್ಲಿ ಅಕ್ಕನನ್ನು ಪಾರ್ವತಿಯ ಅಂಶವೆಂದು ಈ ಕಾದಂಬರಿ ಚಿತ್ರಿಸಿಲ್ಲ. ಗುರುಕಾರಣ್ಯ, ಇಷ್ಟ ಲಿಂಗದ ಚಿತ್ಕೂಸು ಎಂದು ಹೇಳಿದ್ದಾರೆ. ಮಿಂಗುಲಿಗರು ಮಾತ್ರ ಅಕ್ಕನನ್ನು ನೋಡಿ ಸಾಕ್ಷಾತ್ ಪಾರ್ವತಿಯ ಹಾಗೆ ಕಾಣ್ತಾಳೆ ಎನ್ನುತ್ತಾರೆ. ಇದು ಲೇಖಕರ ದ್ವಂದ್ವ ಸ್ಥಿತಿಯನ್ನು ತಿಳಿಸುತ್ತದೆ. ಒಟ್ಟಿನಲ್ಲಿ ಓಂಕಾರಶೆಟ್ಟ ಮತ್ತು ಲಿಂಗಮ್ಮನ ಕೈಗೆ ಶಿವನ ಅನುಗ್ರಹ ಗುರುವಿನ ಮುಖಾಂತರ ಆಗುತ್ತದೆ. ಈ ಪ್ರಸಂಗಗಳಲ್ಲಿ ದೇವ ಮತ್ತು ಭಕ್ತರ ನಡುವೆ ಗುರುವಿನ ಮಧ್ಯಸ್ಥಿಕೆಯನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ಒಟ್ಟಾರೆ ಹೇಳುವುದಾದರೆ ಈ ಮೂರು ಕಾದಂಬರಿಗಳಲ್ಲಿ ಅಕ್ಕನ ಜನನದ ಹಿನ್ನೆಲೆಯು ಸಾಕಷ್ಟು ಸುದೀರ್ಘವಾಗಿ ಬಂದಿದೆ. ಈ ಕಾದಂಬರಿಕಾರರು ಪುರಾಣದ ಕವಿಗಳಂತೆ ನೇರವಾಗಿ ಅಕ್ಕನನ್ನು ಕಾರಣಿಕ ಕನ್ಯೆ ಎಂದು ಹೇಳದೆ, ಈ ವಿಷಯ ಕನಸಿನಲ್ಲಿ ಬಂದ ಹಾಗೆ ಒಂದು ತಂತ್ರವನ್ನು ಸೃಷ್ಟಿಸಿಕೊಂಡಿದ್ದಾರೆ. ಅಕ್ಕನಂತಹ ಮಹಾನ್ ಚೇತನದ ಸೃಷ್ಟಿಯನ್ನು ಸಾಮಾನ್ಯವಲ್ಲವೆಂದು ತೋರಿಸುವುದಕೋಸ್ಕರ ಈ ರೀತಿಯಾಗಿ ಚಿತ್ರಿಸಬಹುದು. ಆದರೂ ಈ ತರಹದ ಒಂದು ಸನ್ನಿವೇಶದ ನಿರ್ಮಾಣದ ಅವಶ್ಯಕತೆ ಇತ್ತೇ ಎನಿಸುತ್ತದೆ. ಏಕೆಂದರೆ ಅಕ್ಕ ಐತಿಹಾಸಿಕ ವ್ಯಕ್ತಿಯಾದ್ದರಿಂದ ಅವಳನ್ನು ಅವತಾರ ಸ್ತ್ರೀ ಎಂದು ಹೇಳಿದರೆ, ಅವಳು ಸಾಧಿಸಿ ಸಿದ್ಧಿಸಿಕೊಂಡ ವೈರಾಗ್ಯಕ್ಕೆ ಅಲೌಕಿಕ ಲೇಪನ ಬಂದುಬಿಡುತ್ತದೆ.

**ಜನನ**

'ಹೂ ಬಿತ್ತು' ಸನ್ನಿವೇಶ ಪ್ರಸ್ತಾಪದ ನಂತರ 'ಗಿರಿಯ ನವಿಲು' ಕಾದಂಬರಿಯ ವಿಷಯ ಬಹುತೀವ್ರವಾಗಿ ಮುನ್ನಡೆಯುತ್ತದೆ. ಸುಮತಿ ಗರ್ಭಿಣಿಯಾದಾಗ ಬಯಕೆಗಳ ಪ್ರಸ್ತಾಪವಿಲ್ಲ. 'ಮಗು ಜನಿಸಿತು' ಸನ್ನಿವೇಶ ಆಗಲೇ ಅಕ್ಕ ಹುಟ್ಟಿ ಒಂದು ತಿಂಗಳಿನ ನಂತರದ ಚಿತ್ರಣವಾಗಿದೆ. ಇಲ್ಲಿ ಕಥೆಯನ್ನು ವೇಗವಾಗಿ ಮುನ್ನಡೆಸುತ್ತಿದ್ದಾರೆ ಕಾದಂಬರಿಕಾರರು. 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಅಕ್ಕನ ಜನನದ ವಿಷಯ ಓಂಕಾರ ಸ್ಮರಣೆಯ ನೆನಪಾಗಿ ಬರುತ್ತದೆ. 'ತರಂಗಿಣಿ' ಕಾದಂಬರಿಯಲ್ಲಿ ಸಾಕಷ್ಟು ದೀರ್ಘವಾಗಿಯೇ ಇದರ ಚಿತ್ರಣ ಬರುತ್ತದೆ. ಲಿಂಗಮ್ಮ ಗರ್ಭವತಿಯಾದಾಗ ಅವಳ ದೇಹದಲ್ಲಿ ಮತ್ತು ಕ್ರಿಯೆಗಳಲ್ಲಿ ಕಂಡು ಬರುವ ಬದಲಾವಣೆಗಳ ಪ್ರಸ್ತಾಪ ಮಾಡುತ್ತಾರೆ. ಲಿಂಗಮ್ಮ ಎಂಟು ತಿಂಗಳ ಗರ್ಭಿಣಿ ಆಗಿದ್ದಾಗ ಗರ್ಭಸ್ಥ ಶಿಶುವಿಗೆ ಮಂತ್ರೋಪದೇಶ ಮಾಡಿ, ಬಸವಣ್ಣನವರು ಗುರುಲಿಂಗರ ಕೈಯಲ್ಲಿ ಅಕ್ಕನಿಗೆಂದೇ ಕಳುಹಿಸಿದ ಲಿಂಗವನ್ನೇ ಧಾರಣೆ ಮಾಡಿ, ಈ ಲಿಂಗವನ್ನು ಲಿಂಗಮ್ಮನ ಶಿವದಾರಕ್ಕೆ ಧರಿಸುತ್ತಾನೆ. 'ದವನದ ಹುಣ್ಣಿಮೆ' ದಿನ ಉಷಃ, ಕಾಲ ಸಮೀಪವಾಗುತ್ತಿರುವಾಗ ಮಹಾದೇವಿಯ ಜನನವಾಯಿತು ಎಂದು ಲೇಖಕಿ ಹೇಳುತ್ತಾರೆ. ಕಾದಂಬರಿಗಾರ್ತಿ ನಿರ್ಮಿಸಿರುವ ಈ ಸನ್ನಿವೇಶ ಸ್ವಲ್ಪ ಸತ್ಯಕ್ಕೆ ದೂರವಾಯಿತೆನಿಸುತ್ತದೆ.

## ನಾಮಕರಣ

'ಗಿರಿಯನವಿಲು' ಕಾದಂಬರಿಯಲ್ಲಿ ಪಾರ್ವತಿಯ ಆಶೀರ್ವಾದಿಂದ ಹುಟ್ಟಿದ ಕೂಸು. ಆದುದರಿಂದ ತಮ್ಮ ಮಗಳಿಗೆ ನಿರ್ಮಲ ಸುಮತಿಯರು ಮಹಾದೇವಿ ಎಂದು ಹೆಸರು ಇಡುತ್ತಾರೆ ಎಂಬ ವಿವರಣೆ ಬರುತ್ತದೆ. 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಮಗು ಹುಟ್ಟಿದ ದಿನವೇ ಓಂಕಾರನ ಅಪೇಕ್ಷೆಯ ಮೇರೆಗೆ ಮರುಳಸಿದ್ಧರು ಮಗುವನ್ನು ನೋಡಲು ಬಂದು ಮಹಾದೇವಿಯ ಸಾತ್ವಿಕ ಕಳೆಯೇ ಈ ಮಗುವಾಗಿರುವುದರಿಂದ ಮಹಾದೇವಿ ಎಂದು ಹೆಸರಿಡುವ ತಮ್ಮ ಆಶಯವನ್ನು ಹೇಳುತ್ತಾರೆ. ದಂಪತಿಗಳ ಒಪ್ಪಿಗೆ ದೊರೆತ ನಂತರವೇ ಮಹಾದೇವಿ ಎಂದು ಮಗುವಿಗೆ ಹೆಸರಿಡುತ್ತಾರೆ ಎಂಬ ವಿವರಣೆಯನ್ನು ನೋಡಬಹುದು.

'ತರಂಗಿಣಿ' ಕಾದಂಬರಿಯಲ್ಲಿ ಮಗು ಹುಟ್ಟಿದ ಹನ್ನೊಂದನೆಯ ದಿನದ ಗುರುಲಿಂಗರ ಸಮೇತ ಮರುಳಸಿದ್ಧರು ಓಂಕಾರನ ಅಪೇಕ್ಷೆಯ ಮೇರೆಗೆ ಮನೆಗೆ ಬರುತ್ತಾರೆ. ಮಹಾದೇವನ ಮೀಸಲು ಸತಿ ಈಕೆಯಾದುದರಿಂದ ಮಹಾದೇವಿ ಎಂದು ನಾಮಕರಣ ಮಾಡುವುದು ಯೋಗ್ಯವೆಂದು ಶಾಸ್ತ್ರೋಕ್ತ ಮತ್ತು ಸಂಪ್ರದಾಯಬದ್ಧವಾಗಿ ಹೆಸರಿಡುತ್ತಾರೆ. ಎಂಬ ವಿವರಣೆ ಬರುತ್ತದೆ. ಈ ಕಾದಂಬರಿಯಲ್ಲಿ ನಾಮಕರಣದ ಪ್ರಸ್ತಾಪ ಸವಿಸ್ತಾರವಾಗಿ ಬರುತ್ತದೆ. ಅಲ್ಲದೇ ಇದರಲ್ಲಿ ಇಂದಿನ ನಾಮಕರಣದ ಸಂಪ್ರದಾಯವನ್ನು ಕಾಣಬಹುದಾಗಿದೆ. ಆದರೆ ಇದೆಲ್ಲಕ್ಕಿಂತ ಮುಖ್ಯವಾಗಿ ಯಾರು ನಾಮಕರಣ ಮಾಡಿದರು ಎಂಬುದು ಲೇಖಕರ ಸ್ವಕಲ್ಪಿತವಾದ ವಿಷಯ. ಇದು ಇತಿಹಾಸದಲ್ಲಿ ದಾಖಲಾಗಿಲ್ಲ.

## ಲಿಂಗದೀಕ್ಷೆ

ಹರಿಹರ ಕವಿಯನ್ನು ಅನುಸರಿಸಿದ ಕಟ್ಟೀಮನಿಯವರು ಮಹಾದೇವಿಗೆ ಏಳೆಂಟು ವರ್ಷಗಳಾಗಿದ್ದಾಗ ಆಕೆಗೆ ವಿಧಿಪೂರ್ವಕವಾಗಿ ಲಿಂಗದೀಕ್ಷೆಯನ್ನು ಮಾಡಿಸಿದ್ದಾರೆ. ಈ ಸನ್ನಿವೇಶವು ಸಾಕಷ್ಟು ವಿವರವಾಗಿ ಬಂದಿಲ್ಲ. ಅಲ್ಲದೇ ಲಿಂಗದೀಕ್ಷೆ ಮಾಡಿದ ಗುರುವಿನ ಹೆಸರನ್ನು ಹೇಳುವುದಿಲ್ಲ. ತಿಪ್ಪೇರುದ್ರಸ್ವಾಮಿಯವರು ಅಕ್ಕ ಹುಟ್ಟಿದ ದಿನ ಮರುಳಸಿದ್ದರು ಇಷ್ಟಲಿಂಗ ಕಟ್ಟಿ ಮಂತ್ರೋಚ್ಚಾರ ಮಾಡಿದ ಚಿತ್ರಣ ಕೊಡುತ್ತಾರೆ. ಮತ್ತು ಗುರುಲಿಂಗರು ಶ್ರೀಶೈಲಕ್ಕೆ ಹೋದಾಗ ಅಕ್ಕನಿಗೆ ಜ್ಞಾನದೀಕ್ಷೆ ಮಾಡುವಂತೆ ಮರುಳಸಿದ್ದರು ಕನಸಿನಲ್ಲಿ ಹೇಳಿದಂತೆ ಭಾಸವಾಗುತ್ತದೆ. ಆ ಕಾರಣದಿಂದ ಗುರುಲಿಂಗರು ಬಾಲ್ಯಾವಸ್ಥೆಯಲ್ಲಿ

ಇಷ್ಟಲಿಂಗವನ್ನು ಕರಕ್ಕಿಟ್ಟು ಪಂಚಾಕ್ಷರಿ ಮಂತ್ರ ರಹಸ್ಯವನ್ನು ತಿಳಿಸಿ, ಶರಣಸತಿ ಲಿಂಗವತಿ ಎಂಬ ಧರ್ಮದ ಉಪದೇಶ ಮಾಡುತ್ತಾರೆ. ಈ ವಿಷಯವನ್ನು ಲೇಖಕರು ಬಹಳ ವಿಸ್ತಾರವಾಗಿಯೇ ತಿಳಿಸಿದ್ದಾರೆ.

'ತರಂಗಿಣಿ' ಕಾದಂಬರಿಯಲ್ಲಿ ಅಕ್ಕನ ಜನನವಾದಾಗ ಅವಳಿಗಾಗಿಯೇ ಕಳುಹಿಸಿದ್ದ ವಿಭೂತಿಯನ್ನು ಧರಿಸಿ, ಇಲ್ಲಿಯವರೆಗೆ ಲಿಂಗಮ್ಮನ ಶಿವದಾರಕ್ಕೆ ಕಟ್ಟಿದ ನಾಗೋಸವನ್ನು ಮಗುವಿನ ಕೊರಳಿಗೆ ಕಟ್ಟಿಸುತ್ತಾರೆ. ಅಕ್ಕ ಯೌವ್ವನಕ್ಕೆ ಕಾಲಿಟ್ಟಾಗ ಧರ್ಮದ ಆಚರಣೆಗಳಿಗೆ ಅನುಸಾರವಾಗಿ ಗುರುಲಿಂಗ ದೇವರು ಈ ರೀತಿ ಹೇಳುತ್ತಾರೆ. 'ಮಗು ನಿನಗೆ ಲಿಂಗಧಾರಣೆ ಆಗಿದೆ. ಈಗ ಆಗುವುದು ಲಿಂಗದೀಕ್ಷೆ ಅದು ಮದುವೆಗೆ ಮುನ್ನ ನಡೆಯುವ ನಿಶ್ಚಯ ಕಾರ್ಯವಿದ್ದಂತೆ. ಇದು ಲಗ್ನಕಾರ್ಯದಂತೆ, ಅಲ್ಲಿ ತಾಯಿ ತಂದೆಯರು ಮಗುವನ್ನು ಶಿವಪಥದಲ್ಲಿ ನಡೆಸುತ್ತೇನೆಂದು ಪ್ರತಿಜ್ಞೆ ಕೈಗೊಂಡರೆ, ಇಲ್ಲಿ ನೀನೇ ಸ್ವತಃ ಪ್ರತಿಜ್ಞೆ ಕೈಗೊಳ್ಳಬೇಕು. ಲಿಂಗಪತಿಯೊಡನೆ ಶರಣ ಸತಿಯಾಗಿ ಅಧ್ಯಾತ್ಮ ಸಂಸಾರವನ್ನು ಆರಂಭಿಸಲು ಗುರು ಈ ದೈವೀವಿವಾಹವನ್ನು ಮಾಡುವನು ತಾಯಿ ... ವಿಶ್ವದ ಬಂಧುಗಳೇ ನಿಬ್ಬಣಿಗರು' ಎಂದು ಧರ್ಮದ ಉಪದೇಶ ಮಾಡುತ್ತಾರೆ. ಈ ಪ್ರಸ್ತಾಪವನ್ನು ಹೃದಯ ಸ್ಪರ್ಶಿಯಾಗಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಮನೋವಿಜ್ಞಾನದ ಹಿನ್ನೆಲೆಯಲ್ಲಿ ಈ ಘಟನೆಗಳನ್ನು ಅವಲೋಕಿಸಿದರೆ ಎಳೆಯ ವಯಸ್ಸಿನಲ್ಲಿಯೇ ಈ ರೀತಿಯಾದ ಧರ್ಮದ ಉಪದೇಶ ಮಾಡಿದುದು ಅವಳ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ. ಇದನ್ನೇ ತನ್ನ ನಿಜವಾದ ಮದುವೆ ಎಂದು ಅಕ್ಕ ತಿಳಿದುಕೊಂಡಳೆಂದು ಹೇಳುವುದು ಸಮಂಜಸವೆನಿಸುತ್ತದೆ.

## ಬಾಲ್ಯ

ಅಕ್ಕನ ಬಾಲ್ಯದ ಬಗ್ಗೆ ಖಚಿತವಾಗಿ ಹೇಳಲು ನಮಗೆ ಐತಿಹಾಸಿಕ ಆಧಾರಗಳು ಇಲ್ಲ. ಈ ಕಾರಣದಿಂದ ಅಕ್ಕನ ಬಾಲ್ಯ ಕಾದಂಬರಿಕಾರರ ಕಾಲ್ಪನಿಕ ಸೃಷ್ಟಿಯಾಗಿವೆ. ಈ ಮೂರು ಕಾದಂಬರಿಗಳು ಅವಳ ಬಾಲ್ಯ ಜೀವನವನ್ನು ನೈಜ ರೀತಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿವೆ. ಮೂರು ಕಾದಂಬರಿಗಳಲ್ಲಿಯೂ ಬಾಲಕಿಯಾದ ಅಕ್ಕನಲ್ಲಿ ಚುರುಕುತನ, ದಿಟ್ಟತನ, ಜ್ಞಾನದಾಹ, ಗುರುಭಕ್ತಿ, ಲಿಂಗಪೂಜೆ ಸ್ವಭಾವಗಳು ಸಮಾನವಾಗಿ ಮೂಡಿ ಬಂದಿದೆ.

ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಅಕ್ಕ ಬಾಲ್ಯದಲ್ಲೇ ಬಸವಣ್ಣ, ಅಲ್ಲಮಪ್ರಭು, ದೇವರದಾಸಿಮಯ್ಯ ಮುಂತಾದ ಶರಣರ ವಚನಗಳನ್ನು ಅಧ್ಯಯನ ಮಾಡುತ್ತಿದ್ದಳು ಎಂಬ ವಿಷಯ ಬರುತ್ತದೆ. ಇದು ಅಕ್ಕನ ಉಜ್ವಲ ವ್ಯಕ್ತಿತ್ವ ನಿರ್ಮಾಣಕ್ಕೆ ಅಡಿಪಾಯವಾಗಿದೆ. ಈ ಬುನಾದಿಗೆ ಓಂಕಾರ ಮತ್ತು ಗುರು ಲಿಂಗದೇವರ ಶ್ರಮವಿದೆ ಎಂಬುದು ತಿಳಿದುಬರುತ್ತದೆ.

'ಗಿರಿಯನವಿಲು' ಕಾದಂಬರಿಯಲ್ಲಿ ಗುರುಶಿಷ್ಯರ ಮಧ್ಯೆ ಈ ರೀತಿಯ ಅನ್ಯೋನ್ಯ ಸಂಬಂಧ ಕಂಡುಬಂದಿಲ್ಲವಷ್ಟೆ. ಅಲ್ಲಿ ಗುರುಲಿಂಗದೇವರು ನಿರ್ಮಲನ ಮನೆಗೆ ಬಂದು ಮಹಾದೇವಿಗೆ ಅಧ್ಯಯನ ಮಾಡಿಸುತ್ತಿದ್ದರೆಂಬ ವಿಷಯ ಬರುತ್ತದೆ. 'ಕದಳಿಯ ಕರ್ಪೂರ' ಮತ್ತು 'ತರಂಗಿಣಿ' ಕಾದಂಬರಿಯಲ್ಲಿ ಅಕ್ಕ ಮಠದ ಶಾಲೆಯಲ್ಲಿ ಓದಿ, ನಂತರ ಗುರುಲಿಂಗದೇವರ ಸಾನ್ನಿಧ್ಯದಲ್ಲಿ ವಚನಗಳ ಅಧ್ಯಯನ ಮಾಡುತ್ತಿದ್ದಳು ಎಂಬ ಅಂಶ ಬರುತ್ತದೆ.

'ಗಿರಿಯನವಿಲು' ಕಾದಂಬರಿಯಲ್ಲಿ ಅಕ್ಕ ಬಾಲ್ಯದಿಂದಲೇ ಪ್ರತಿನಿತ್ಯ ಚೆನ್ನಮಲ್ಲಿಕಾರ್ಜುನನ ಗುಡಿಗೆ ಹೋಗುತ್ತಿದ್ದಳೆಂದು ಕಾದಂಬರಿಕಾರರು ತಿಳಿಸುತ್ತಾರೆ. ಆದರೆ ಈ ವಿಷಯ ಇನ್ನುಳಿದೆರಡು ಕಾದಂಬರಿಗಳಲ್ಲಿ ಇಲ್ಲ. 'ಕದಳಿಯ ಕರ್ಪೂರ' ಕಾದಂಬರಿ ಪ್ರಾರಂಭವಾಗುವುದು ಅಕ್ಕನ ಬಾಲ್ಯದಿಂದ ಈ ಕಾದಂಬರಿಯಲ್ಲಿ ಅಕ್ಕ ವಿದ್ಯಾಭ್ಯಾಸ ಪ್ರಾರಂಭಿಸಿದ ವಯಸ್ಸನ್ನು ಹೇಳಿಲ್ಲ. 'ಗಿರಿಯನವಿಲು' ಕಾದಂಬರಿಯಲ್ಲಿ ನಾಲ್ಕು ವರ್ಷದ ಬಾಲೆಗೆ ವಿದ್ಯೆ ಕೊಡಲು ಗುರುಲಿಂಗದೇವರು ನಿರಾಕರಿಸುತ್ತಾರೆ. ಆದರೆ 'ತರಂಗಿಣಿ' ಕಾದಂಬರಿಯಲ್ಲಿ ನಾಲ್ಕು ವರ್ಷದ ಬಾಲೆಗೆ 'ಓಂ ಶ್ರೀ ಗುರುಬಸವಲಿಂಗಾಯನಮಃ' ಮಂತ್ರದಿಂದ ಪಾಠವನ್ನು ಆರಂಭಿಸುತ್ತಾರೆ. 'ಗಿರಿಯನವಿಲು' ನಲ್ಲಿ ಏಳು ವರ್ಷದವಳಾದಾಗ ಓಂಕಾರದಿಂದ ಅಕ್ಕನ ವಿದ್ಯಾಭ್ಯಾಸ ಪ್ರಾರಂಭವಾಗುತ್ತದೆ. ಇದು ಈಗಿನ ಮಗುವಿನ ವಿದ್ಯಾಭ್ಯಾಸದ ಕ್ರಮವಾಗಿದೆ. 'ಗಿರಿಯನವಿಲು' ಮತ್ತು ಕದಳಿಯ ಕರ್ಪೂರ' ಕಾದಂಬರಿಗಳ ಅಭಿಪ್ರಾಯದಂತೆ ಅಕ್ಕನಿಗೆ ಬಾಲ್ಯದಲ್ಲಿಯೇ ಲಿಂಗದೀಕ್ಷೆಯಾಗಿರುತ್ತದೆಂದು ಅಭಿವ್ಯಕ್ತಗೊಂಡಿದ್ದರೆ, 'ತರಂಗಿಣಿ' ಕಾದಂಬರಿಯಲ್ಲಿ ಇದರ ಪ್ರಸ್ತಾಪವೇ ಆಗಿಲ್ಲ. 'ತರಂಗಿಣಿ ಕಾದಂಬರಿಯಲ್ಲಿ ಅಕ್ಕನ ಬಾಲ್ಯದಾಟಗಳು ಶಿವಲೀಲೆಗಳಂತೆ ಕಂಡುಬಂದು ಸಹಜತೆಗೆ ಕುಂದುಂಟಾಗಿದೆ. 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಬಾಲೆಯಲ್ಲಿ ಭಕ್ತಿ ಹಂತ ಹಂತವಾಗಿ ಬೆಳೆಯುವ ಚಿತ್ರಣ ಕಂಡುಬರುತ್ತದೆ. ಗುರುಲಿಂಗರು ಶ್ರೀಶೈಲಯಾತ್ರೆಯ

ಅನುಭವಗಳನ್ನು ಹೇಳುತ್ತಿದ್ದಂತೆ 'ಕದಳಿವನ' ಎಂಬ ಶಬ್ದ ಎಳೆಯ ಮನದಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಕಲ್ಯಾಣ ವಿಷಯ ಬಂದಾಗ ಬಸವಣ್ಣನನ್ನು ಕಾಣಬೇಕೆಂಬ ಹಂಬಲ ಆಕೆಯ ಮನಸ್ಸಿನಲ್ಲಿ ಬೇರೂರಿತು ಎನ್ನುವ ಸಹಜ ರೀತಿಯಲ್ಲಿ ಕಾದಂಬರಿ ಮುನ್ನಡೆಯುತ್ತದೆ. ಹೆಚ್ಚು ಕಡಿಮೆ ಇದೇ ರೀತಿಯ ಸನ್ನಿವೇಶ ನಿರ್ಮಾಣವನ್ನು 'ಗಿರಿಯನವಿಲು' ಕಾದಂಬರಿಯಲ್ಲಿಯೂ ಕಾಣಬಹುದು.

'ಕದಳಿಯ ಕರ್ಪೂರ' ಮತ್ತು 'ತರಂಗಿಣಿ' ಕಾದಂಬರಿಯಲ್ಲಿ ಲಿಂಗದೀಕ್ಷೆಯಾದ ನಂತರ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ಅಕ್ಕ ದೃಢವಾಗಿ ನಂಬುತ್ತಾಳೆ. ಆದರೆ 'ಗಿರಿಯನವಿಲು' ಕಾದಂಬರಿಯಲ್ಲಿ ವಿಭಿನ್ನವಾದ ರೀತಿಯಲ್ಲಿ ಬಂದಿದೆ. ನಮ್ಮ ಧರ್ಮದ ಪ್ರಕಾರ ಚೆನ್ನಮಲ್ಲಿಕಾರ್ಜುನನು ನನಗೂ ನಿಮ್ಮಮ್ಮನಿಗೂ ಎಲ್ಲರಿಗೂ ಪತಿ ನಾವೆಲ್ಲರೂ ಆತನಿಗೆ ಸತಿಯರಿದ್ದಂತೆ ಎಂದು ನಿರ್ಮಲ ಮಗಳಿಗೆ ಹೇಳುತ್ತಾನೆ. ಈ ಸಿದ್ಧಾಂತ ಹಂತ ಹಂತವಾಗಿ ಅಕ್ಕನ ಮನಸ್ಸಿನಲ್ಲಿ ಮೂಡುತ್ತಾ ಸಾಗುತ್ತದೆ. ಚಂದ್ರಮತಿ, ಕೋಳೂರ ಕೊಡಗೂಸಿನ ಕಥೆಗಳು ಪರಿಣಾಮ ಬೀರುತ್ತಾ ಸಾಗಿದ್ದಂತೆ ಅಲ್ಲಮನ ವೈರಾಗ್ಯಕ್ಕೆ ಮನಸೋತು ತಾನೂ ಅದೇ ಮಾರ್ಗದಲ್ಲಿ ನಡೆಯಲು ನಿರ್ಧರಿಸುತ್ತಾಳೆ. ಮತ್ತೊಂದು ಕಡೆ ಹೆಂಡತಿಯನ್ನು ಕ್ರೂರ ರೀತಿಯಿಂದ ನಡೆಸಿಕೊಳ್ಳುವ ಗಂಡಂದಿರನ್ನು ಕಂಡು ಮನ ರೋಸಿ ಹೋಗಿ ಲೌಕಿಕ ಜೀವನದ ಬಗ್ಗೆ ಜುಗುಪ್ಸೆ ಉಂಟಾಗುತ್ತದೆ. ಆಗ ಚೆನ್ನಮಲ್ಲಿಕಾರ್ಜುನನನ್ನು ತನ್ನ ನಿಜವಾದ ಗಂಡ ಎಂಬ ಭಾವವನ್ನು ತಾನೇ ಬೆಳೆಸಿಕೊಳ್ಳುತ್ತಾಳೆ. ಈ ರೀತಿಯಾಗಿ ತನ್ನ ವ್ಯಕ್ತಿತ್ವವನ್ನು ತಾನೇ ರೂಪಿಸಿಕೊಳ್ಳುವಂತೆ ಚಿತ್ರಿಸಿದ್ದಾನೆ. ಈ ವ್ಯಕ್ತಿತ್ವ ನಿರ್ಮಾಣದಲ್ಲಿ ಬೇರೆ ಯಾವ ಪಾತ್ರಗಳು ಶಕ್ತಿಗಳು ಕೆಲಸ ಮಾಡಿಲ್ಲ ಎಂಬುದನ್ನು ಕಾದಂಬರಿ ಈ ಹಂತದಲ್ಲಿ ಸ್ಪಷ್ಟಪಡಿಸುತ್ತದೆ. ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಬೇರೆ ಪಾತ್ರಗಳು ದಾರಿ ದೀವಿಗೆಗಳಾಗಿವೆ.

ಮೂರು ಕಾದಂಬರಿಗಳಲ್ಲಿಯೂ ಅಕ್ಕನಿಗೆ ಬಾಲ್ಯದಲ್ಲಿ ಸ್ನೇಹಿತರಿದ್ದರು ಎಂದು ಕಾದಂಬರಿಕಾರರು ಚಿತ್ರಿಸಿದ್ದಾರೆ. ಮೂರು ಕಾದಂಬರಿಗಳಲ್ಲಿ ಸ್ನೇಹಿತರ ಹೆಸರುಗಳು ಬೇರೆ ಬೇರೆಯಾಗಿದೆ. ಬಹುಶಃ ಇದು ಲೇಖಕನ ಸ್ವಕಲ್ಪಿತ ಪಾತ್ರಗಳಾಗಿವೆ. ಇದರ ಉದ್ದೇಶ ಅಕ್ಕನ ಪಾತ್ರಕ್ಕೆ ಹೊಳಪನ್ನು ತಂದುಕೊಡುವುದಾಗಿದೆ. ಏಕೆಂದರೆ ಈ ಕಾದಂಬರಿಗಳಲ್ಲಿ ಬರುವ ಎಲ್ಲ ಗೆಳೆಯ ಗೆಳತಿಯರು ಲೌಕಿಕ ಆಸಕ್ತಿಯುಳ್ಳವರೇ ಆಗಿದ್ದಾರೆ. ಇವರ ಮನೋಧರ್ಮದ ಜೊತೆಗೆ ಅಕ್ಕನ ಮನೋಧರ್ಮದ ತುಲನೆ ಮಾಡುವ ಸಲುವಾಗಿ

ಸೃಷ್ಟಿಸಿಕೊಂಡ ಪಾತ್ರಗಳಾಗಿವೆ. ಇವರ ಜೊತೆಗಿನ ಅಕ್ಕನ ಚಿತ್ರಣ ಈ ರೀತಿಯಾಗಿದೆ. ಗಿರಿಯ ನವಿಲುವಿನ ಕಮಲಾಂಬಿಕೆಯಾಗಲೀ, ಕದಳಿಯ ಕರ್ಪೂರದ ಶಂಕರಿ ಕಾತ್ಯಾಯಿನಿ, ದಾಕ್ಷಾಯಿಣಿಯಾಗಲೀ, ತರಂಗಿಣಿಯ ರುದ್ರಾಣಿಯಾಗಲೀ, ಅಕ್ಕನ ಲೌಕಿಕ ಆಸಕ್ತಿಯ ಗೆಳತಿಯರು 'ತರಂಗಿಣಿಯ' ಅಕ್ಕ ಲೌಕಿಕದ ಆಟ ಆಡದೆ ಶಿವನನ್ನು ಒಲಿಸಿಕೊಳ್ಳುವ ಪಾರ್ವತಿಯ ಆಟವನ್ನು ಆಡುತ್ತಾಳೆ. 'ಗಿರಿಯ ನವಿಲು' ಕಾದಂಬರಿಯ ಅಕ್ಕ ವಿಶ್ವನಾಥ ಕಮಲಾಂಬಿಕೆಯರೊಂದಿಗೆ ಗಂಡ ಹೆಂಡಿರ ಆಟ ಆಡುತ್ತಾಳೆ. ತಾನು ಗಂಡಸಿಗಿಂತ ಕಡಿಮೆ ಏನಿಲ್ಲ, ಅವನ ಸರಿಸಮಾನಳು ಎಂದು ವಾದಿಸುತ್ತಾಳೆ. ಅತ್ತ ಕಮಲಾಂಬಿಕೆ ಸಮಾಜದ ಪ್ರತಿನಿಧಿ ಎಂಬಂತೆ ಸೊಸೆಯ ನಡವಳಿಕೆಯ ಬಗ್ಗೆ ಕಟ್ಟುಪ್ಪಣೆಗಳನ್ನು ಹಾಕುತ್ತಾಳೆ. ಕೊನೆಗೆ ಅಕ್ಕ ತನಗೆ ಸಂಸಾರ ಬೇಡ ಎಂದು ಗಂಡನನ್ನು ತ್ಯಜಿಸಿ ಹೋಗುವ ಘಟನೆಗಳು ಅಕ್ಕನ ಭವಿಷ್ಯದ ಬಾಳಿನ ವ್ಯಾಖ್ಯಾನದಂತಿದೆ. ಈ ಒಂದು ಚಿತ್ರಣ ಲೇಖಕರ ಮನೋಧರ್ಮಗಳನ್ನು ಚಿತ್ರಿಸುತ್ತದೆ. ಪ್ರಗತಿಪರರಾದ ಕಟ್ಟೀಮನಿಯವರು ಸಮಾಜದಲ್ಲಿ ಹೆಣ್ಣು ಗಂಡು ಸಮಾನರು ಎಂಬ ಭಾವನೆ ವ್ಯಕ್ತಪಡಿಸಿದರೆ ಸಂನ್ಯಾಸಿಯಾದ ಮಾತೆ ಮಹಾದೇವಿಯವರು ಅದೇ ನಿಲುವಿನಿಂದಲೇ ಕಾದಂಬರಿಯಲ್ಲಿ ಅವಳಿಗೆ ಲೌಕಿಕ ಆಸಕ್ತಿ ಇರಲಿಲ್ಲವೆಂದು ಚಿತ್ರಿಸುತ್ತಾರೆ.

ಒಟ್ಟಾರೆ ಕಾದಂಬರಿಕಾರರಿಗೆ ಅಕ್ಕನಿಗೆ ಲೌಕಿಕ ಬದುಕಿನ ಬಗ್ಗೆ ಬಾಲ್ಯದಿಂದಲೂ ಆಸಕ್ತಿಯಿರಲಿಲ್ಲ. ಆ ವಯಸ್ಸಿನ ಮಕ್ಕಳಿಗಿಂತ ವಿಭಿನ್ನವಾದ ವ್ಯಕ್ತಿತ್ವ ಈಕೆಯದು. ಇದಲ್ಲದೆ ಬಾಲ್ಯದಲ್ಲಿಯೇ ಸಂಸಾರದ ಬಗ್ಗೆ ತಾತ್ಸಾರ ನಿಲುವುಗಳನ್ನು ಹೊಂದಿದ ಈಕೆಗೆ ಮುಂದೆ ವೈರಾಗ್ಯನಿಧಿಯಾಗಿ ರೂಪುಗೊಳ್ಳಲು ಸಹಾಯಕವಾಯಿತು.

ತರಂಗಿಣಿಯಲ್ಲಿ ಹತ್ತನೆಯ ವರ್ಷದವಳಿದ್ದ ಅಕ್ಕ ಸಮಗಾರ ಮಾದಯ್ಯನಿಗೆ ಊಟ ಕೊಡಿಸುವ ಸಂದರ್ಭ. ಸ್ತ್ರೀ ಪುರುಷನಿಗಿಂತ ಕೀಳಿಲ್ಲ ಎಂಬ ದಿಟ್ಟತನದಿಂದ ಶಿವಮೂರ್ತಪ್ಪನ ಜೊತೆ ವಾದಿಸುವ ಸನ್ನಿವೇಶಗಳು ಅಕ್ಕನ ವಿಮರ್ಶಾ ಪ್ರಜ್ಞೆ, ಬಸವಣ್ಣನವರ ತತ್ವಗಳನ್ನು ಎತ್ತಿಹಿಡಿಯುವ ಮನೋಭಾವ ಸೊಗಸಾಗಿದೆ. ಇದೇ ಪ್ರಕಾರದ ವಾದ-ವಿವಾದಗಳು ಗಿರಿಯನವಿಲು ಕಾದಂಬರಿಯಲ್ಲಿಯೂ ಕೂಡ ಅಕ್ಕ ಚಂದಿಮದೇವನೊಡನೆ ಈ ವಿಷಯವನ್ನು ಕುರಿತು ಚರ್ಚಿಗಿಳಿಯುವ ಸನ್ನಿವೇಶಗಳು ಕಂಡುಬರುತ್ತದೆ. ಆದರೆ 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಅಕ್ಕನ ಬಾಲ್ಯದಲ್ಲಿ ಇಂತಹ ಸನ್ನಿವೇಶದ ಚಿತ್ರಣ ಕಾಣಸಿಗುವುದಿಲ್ಲ.

ಬಾಲ್ಯದಲ್ಲಿನ ಅಕ್ಕನ ಶಿಕ್ಷಣ ವಿಷಯಕ್ಕೆ ಬಂದರೆ, ಹೆಜ್ಜೆ ಹೆಜ್ಜೆಗೂ ಅವಳು ಹೆಣ್ಣು ಎಂಬ ಕಾರಣಕ್ಕೆ ಮೊಟಕುಗೊಳಿಸುವ ಪ್ರಯತ್ನ ತಾಯಿಯೇ ಮಾಡುತ್ತಾಳೆ. ಆದರೂ ಅಕ್ಕ ದಿಟ್ಟತನದಿಂದ ವಿದ್ಯಾಭ್ಯಾಸ ಮುಂದುವರೆಸುತ್ತಾಳೆ. ಇದು 'ತರಂಗಿಣಿ' ಮತ್ತು 'ಗಿರಿಯನವಿಲು' ಎರಡು ಕಾದಂಬರಿಗಳಲ್ಲಿಯೂ ಸಮಾನವಾಗಿ ಮೂಡಿಬಂದಿದೆ. ಅಕ್ಕ ತಾನು ಗಂಡಾಗಿ ಹುಟ್ಟಬಂದಿದ್ದರೆ ಪುರುಷರಂತೆ ದೇಶವನ್ನೆಲ್ಲಾ ಸುತ್ತಿ ಸರ್ವವಿದ್ಯೆಗಳನ್ನು ಕಲಿಯಬಹುದಾಗಿತ್ತು ಎಂದು ಕಟ್ಟೀಮನಿಯವರು ಚಿತ್ರಿಸಿದರೆ, ಗಂಡಸಾಗಿ ಹುಟ್ಟದಿದುದ್ದಕ್ಕೆ ಭೇದವಿಲ್ಲ. ಅವಳು ಹೆಣ್ಣು ರೂಪದಲ್ಲಿಯೇ ಇದ್ದು ಗಂಡುತನವನ್ನು ಮೆರೆಯಲು ಬಯಸುತ್ತಾಳೆಂದು, ಮಾತೆ ಮಹಾದೇವಿಯವರು ಅಕ್ಕನನ್ನು ಚಿತ್ರಿಸಿದ್ದಾರೆ. ಇಲ್ಲಿ ಕಾದಂಬರಿಕಾರರ ಮನಸ್ಥಿತಿಗಳು ಅಭಿವ್ಯಕ್ತಿಗೊಂಡಿವೆ. ಕಟ್ಟೀಮನಿಯವರು ಸ್ತ್ರೀನೆಲೆಯಲ್ಲಿ ನಿಂತು ಆಲೋಚಿಸಿದರೆ ಮಾತೆ ಮಹಾದೇವಿಯವರು ಸ್ತ್ರೀವಾದಿ ಚಿಂತಕಿಯಾಗಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಮೂರು ಕಾದಂಬರಿಗಳಲ್ಲಿಯೂ ಆಕೆಯ ಬಾಲ್ಯವನ್ನು ಸೊಗಸಾಗಿ ಚಿತ್ರಿಸಿದ್ದಾರೆ. ತರಂಗಿಣಿಯಲ್ಲಿ ದೀರ್ಘವಾಗಿ ಅವಳ ಬಾಲ್ಯ ಕಂಡು ಬಂದರೆ ಉಳಿದೆರಡು ಕಾದಂಬರಿಗಳಲ್ಲಿ ಸಂಕ್ಷಿಪ್ತವಾಗಿ ಮೂಡಿಬಂದಿದೆ. ಅಕ್ಕ ಬಾಲ್ಯದಲ್ಲಿಯೇ ಚೈತನ್ಯದ ಚಿಲುಮೆ, ದಿಟ್ಟತನ, ಛಲಗಾರ್ತಿ, ಸರ್ವಗುಣ ಭೂಷಿತೆಯನ್ನಾಗಿ ಕಾದಂಬರಿಕಾರರು ಚಿತ್ರಿಸಿದ್ದಾರೆ.

## ಯೌವ್ವನ

ಇನ್ನು ಬಾಲ್ಯಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಟ್ಟ ಸಂದರ್ಭ ಅಕ್ಕನ ಜೀವನದಲ್ಲಿ ಮಹತ್ವದ ತಿರುವುಗಳನ್ನು ಪಡೆಯುತ್ತದೆ. ಅಕ್ಕ ಅಪ್ರತಿಮ ಸುಂದರಿ ಎಂಬುದನ್ನು ಮೂರು ಕಾದಂಬರಿಗಳಲ್ಲಿಯೂ ಸಮಾನವಾಗಿ ಚಿತ್ರಿಸಿದ್ದಾರೆ. ಮೂರು ಕಾದಂಬರಿಗಳಲ್ಲಿಯೂ ತಾಯಿಗೆ ಮಗಳ ಮದುವೆಯ ಬಗ್ಗೆ ಆತಂಕ ಮತ್ತು ಕಾಳಜಿ, ತಂದೆಗೂ ಮಗಳ ಮದುವೆ ಬಗ್ಗೆ ಆಸಕ್ತಿ ಇದ್ದರೂ ಅಷ್ಟು ತೀವ್ರತರವಾಗಿ ಇಲ್ಲ. ಅದರಲ್ಲಿಯೂ ತರಂಗಿಣಿ ಕಾದಂಬರಿಯಲ್ಲಿ ನಿರ್ಮಲ ತನ್ನ ಮಗಳು ಸಂನ್ಯಾಸಿನಿಯಾದರೂ ನಾನು ಚಿಂತಿಸುವುದಿಲ್ಲ ಎಂಬ ನಿಲುವನ್ನು ತಳೆದವನು. 'ಗಿರಿಯನವಿಲು' ಕಾದಂಬರಿಯಲ್ಲಿ ಮಹಾದೇವಿಯನ್ನು ನೆರಳಿನಂತೆ ಅನುಸರಿಸುವ ರುದ್ರಾಂಬಿಕೆಯ ಮಗ ವಿಶ್ವನಾಥನಿಗೆ ಕೊಡುವ ಆಸೆ ಸುಮತಿಗಿದ್ದರೆ, ಜ್ಞಾನದ ದೃಷ್ಟಿಯಿಂದ ತನ್ನ ಮಗಳಿಗೆ ಅವನು ಅನುರೂಪನಲ್ಲ ಎಂಬ ಭಾವನೆ ನಿರ್ಮಲಶೆಟ್ಟಿಯದು. ಈ ಕಾದಂಬರಿಯಲ್ಲಿ ಮದುವೆಯ

ವಿಷಯವಾಗಿ ತಂದೆ ತಾಯಿಗಳು ನೇರವಾಗಿ ಸಂಭಾಷಣೆಗಿಳಿಯುವುದಿಲ್ಲ. ಮೂರು ಕಾದಂಬರಿಗಳಲ್ಲಿಯೂ ಅಕ್ಕ ಮದುವೆಯನ್ನು ತಿರಸ್ಕರಿಸುತ್ತಾಳೆ. ಇದಕ್ಕೆ ಬೆಂಗಾವಲಾಗಿ ಗುರುಲಿಂಗರು ನಿಲ್ಲುತ್ತಾರೆ. ಅವರು ಈಕೆಗೆ ಅಧ್ಯಾತ್ಮ ಜೀವನದತ್ತ ದಾರಿ ತೋರುತ್ತಾರೆ.

ಮದುವೆಯ ವಿಷಯದ ಬಗ್ಗೆ ಗುರುಗಳ ಹತ್ತಿರ ಚರ್ಚೆ ಮಾಡುವ ಪ್ರಸಂಗ ಬಂದಿದೆ. ಇದು ಮೂರು ಕಾದಂಬರಿಗಳಲ್ಲಿಯೂ ಮೂಡಿಬಂದಿದೆ. ಕದಳಿಯ ಕರ್ಪೂರ ಮತ್ತು ಗಿರಿಯನವಿಲು ಕಾದಂಬರಿಗಳಲ್ಲಿ ಮದುವೆಯನ್ನು ತಿರಸ್ಕರಿಸಿದರೂ ಸ್ಪಷ್ಟವಾಗಿ ತನ್ನ ಮುಂದಿನ ನಿಲುವು ಏನು ಎಂಬುದು ತಿಳಿಸುವುದಿಲ್ಲ. ಚನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂಬ ದೃಢ ನಿರ್ಧಾರ ತಿಳಿಸುತ್ತಾಳೆ. ಆದರೆ ತರಂಗಿಣಿ ಕಾದಂಬರಿಯಲ್ಲಿ ಕೊನೆಯವರೆಗೂ ವಿರಾಗಿಣಿಯಾಗಿಯೇ ಉಳಿಯುತ್ತಾಳೆ. ಈ ಲೋಕ ನಿಂದನೆಗಳನ್ನು ಎದುರಿಸಲು ಎದೆಗಾರಿಕೆ ಇಲ್ಲದ ದಿನ ನಾನು ಮನೆ-ಮಠ-ಊರು-ಕರುಳ ಸಂಬಂಧಗಳನ್ನು ತೊರೆದುಕೊಂಡು ದೇಶಾಂತರ ಹೋಗುತ್ತೇನೆಂದು ಸ್ಪಷ್ಟವಾಗಿ ಹೇಳುತ್ತಾಳೆ. ಇದು ಕಾದಂಬರಿಗಾರ್ತಿಯ ಮನೋಧರ್ಮದ ಚಿತ್ರಣವಾಗಿದೆ. ಏಕೆಂದರೆ ಅಕ್ಕನಿಗೆ ವೈರಾಗ್ಯ ಮೂಡಿದ್ದು ಸಹಜ. ಆದರೆ ಅವಳ ಇತಿಹಾಸವನ್ನು ಗಮನಿಸಿದರೆ, ಅವಳಿಗೆ ಎಲ್ಲ ಸಂಬಂಧಗಳನ್ನು ತೊರೆದು ಹೋಗುವ ನಿರ್ಧಾರ ಆಕೆಗೆ ಮೊದಲೇ ಇರಲಿಲ್ಲ. ಅದು ಸನ್ನಿವೇಶ ಸಂದರ್ಭಕ್ಕೆ ತೆಗೆದುಕೊಂಡ ನಿಲುವುಗಳಾಗಿವೆ ಎಂದೆನಿಸುತ್ತದೆ.

ಗಿರಿಯನವಿಲು ಕಾದಂಬರಿಯಲ್ಲಿ ರಾಜಶೇಖರ ಎಂಬ ಪಾತ್ರದ ಸೃಷ್ಟಿಯಾಗಿದೆ. ಈತನಿಗೆ ಅಕ್ಕನನ್ನು ಮದುವೆಯಾಗಬೇಕೆಂಬ ಆಸೆ ಇದ್ದರೂ ನೇರವಾಗಿ ಅವಳನ್ನು ಕೇಳುವುದಿಲ್ಲ. ತರಂಗಿಣಿ ಕಾದಂಬರಿಯಲ್ಲಿ ಈತ ಅಂತರಂಗದ ಪ್ರೇಮಿಯಾಗಿದ್ದಾನೆ. ಅವಳನ್ನೇ ಆಳವಾಗಿ ಪ್ರೀತಿಸುತ್ತಾನೆ. ಈ ಹೃದಯಗಳ ಪ್ರೇಮ ಗಂಡ ಹೆಂಡತಿ ಎಂಬ ಸಂಬಂಧಕ್ಕಿಂತಲೂ ಮಿಗಿಲಾದುದಾಗಿದೆ. ಗಿರಿಯನವಿಲು ಕಾದಂಬರಿಗಿಂತ ಇಲ್ಲಿ ಈ ಪಾತ್ರ ಪರಿಪೂರ್ಣತೆಯನ್ನು ಸಾಧಿಸಿದೆ. ಆದರೆ ಕದಳಿಯ ಕರ್ಪೂರ ದಲ್ಲಿ ಈ ಪಾತ್ರದ ಸೃಷ್ಟಿಯೇ ಇಲ್ಲ.

ಗಿರಿಯನವಿಲು ಕಾದಂಬರಿಯಲ್ಲಿ ಕಮಲಾಂಬಿಕೆಯ ಪಾತ್ರ ಲೇಖಕರ ಸೃಷ್ಟಿಯಾಗಿದೆ. ಈಕೆಗೆ ಸಂಸಾರದ ಬಗ್ಗೆ ಜುಗುಪ್ಸೆ ಹುಟ್ಟುವಂತೆ ಚಿತ್ರಿಸಿದ್ದಾರೆ. ಲೌಕಿಕ ಆಸಕ್ತಿಯನ್ನು ಹೊಂದಿದ ಕಮಲಾಳಿಗೆ ಸಂಸಾರದ ಬಗ್ಗೆ ತಾತ್ಸಾರ, ನಿರ್ಲಕ್ಷ್ಯತೆ ಬೆಳೆಯುತ್ತದೆ. ಇದು ಸಹಜವಾಗಿಯೇ ಅಕ್ಕನ ಮೇಲು ಪ್ರಭಾವಬೀರುತ್ತದೆ. ಅಕ್ಕ ಲೌಕಿಕ ಜೀವನದ ಮೇಲೆ

ಜುಗುಪ್ಸೆ ಹೊಂದಿ ವೈವಾಹಿಕ ಜೀವನದಿಂದ ವಿಮುಖವಾಗಿ ಉಳಿಯಲು ಇದು ಒಂದು ಕಾರಣವಾಗುವಂತೆ ಲೇಖಕರು ಚಿತ್ರಿಸಿದ್ದಾರೆ. ಇಂತಹ ಒಂದು ಸನ್ನಿವೇಶ ನಿರ್ಮಾಣ ಉಳಿದೆರಡು ಕಾದಂಬರಿಯಲ್ಲಿ ದೊರೆಯುವುದಿಲ್ಲ. ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಯಲ್ಲಿ ಓಂಕಾರ ಮತ್ತು ಗುರುಲಿಂಗದೇವರು ಅಕ್ಕನನ್ನು ಅಲೌಕಿಕ ಜ್ಞಾನದತ್ತ ಸೆಳೆದರೆ, ಲಿಂಗಮ್ಮ ಲೌಕಿಕ ಜೀವನಕ್ಕೆ ಎಳೆದು ತರುವ ಪ್ರಯತ್ನದ ವೈರುಧ್ಯಗಳನ್ನು ಚಿತ್ರಿಸಿದ್ದಾರೆ. ಇದರ ಜೊತೆಗೆ ಸಮಾಜದ ನಿಂದನೆಯನ್ನು ಲಿಂಗಮ್ಮ ತರಂಗಿಣಿ ಕಾದಂಬರಿಯಲ್ಲಿ ನೇರವಾಗಿಯೇ ಎದರಿಸುತ್ತಿದ್ದರೆ, ಕದಳಿಯ ಕರ್ಪೂರ ಕಾದಂಬರಿಯಲ್ಲಿ ಪರೋಕ್ಷವಾಗಿ ಎದುರಿಸುವ ಚಿತ್ರಣ ಇದೆ. ಆದರೆ ಗಿರಿಯನವಿಲು ಕಾದಂಬರಿಯಲ್ಲಿ ಇಂತಹ ಒಂದು ಚಿತ್ರಣವೇ ಇಲ್ಲ.

ಮೂರು ಕಾದಂಬರಿಗಳಲ್ಲಿಯೂ ಅಕ್ಕನಿಗೆ ವಚನಗಳನ್ನು ಬರೆಯುವ ಹವ್ಯಾಸ ಬಾಲ್ಯದಿಂದಲೂ ಇತ್ತು. ಅದು ಯೌವ್ವನಕ್ಕೆ ಬಂದಾಗ ಇನ್ನು ತೀವ್ರತರವಾಯಿತು ಎನ್ನುತ್ತಾರೆ. ಹಾಗೆಯೇ ಇತರ ವಚನಕಾರರ ವಚನಗಳನ್ನು ಆಕೆ ಅಭ್ಯಾಸಮಾಡುತ್ತಿದ್ದಳು ಎಂಬ ಚಿತ್ರಣ ಎಲ್ಲ ಕಾದಂಬರಿಗಳಲ್ಲಿಯು ಸಮಾನವಾಗಿಯೇ ದೊರೆಯುತ್ತದೆ. ಅನುಭವಮಂಟಪ, ಶೂನ್ಯ ಸಿಂಹಾಸನಗಳ ಬಗ್ಗೆ ಗುರುಗಳು ವಿವರಿಸಿ ಹೇಳುವ ಚಿತ್ರಣ ತರಂಗಿಣಿ ಮತ್ತು ಕದಳಿಯ ಕರ್ಪೂರ ಕಾದಂಬರಿಯಲ್ಲಿ ದೊರೆತರೆ, ಗಿರಿಯನವಿಲುನಲ್ಲಿ ಇಂತಹ ಯಾವುದೇ ಸನ್ನಿವೇಶದ ನಿರ್ಮಾಣವಾಗಿಲ್ಲ. ಹಾಗೆಯೇ ಅಕ್ಕ ವಿರಹ ವೇದನೆಯಲ್ಲಿ ಬಳಲುವ ಚಿತ್ರವೂ ಗಿರಿಯನವಿಲು ಕಾದಂಬರಿಯಲ್ಲಿ ಕಂಡುಬರುವುದಿಲ್ಲ. ತರಂಗಿಣಿ ಕಾದಂಬರಿಯಲ್ಲಿ ಈ ಚಿತ್ರಣ ದೀರ್ಘ ಮತ್ತು ಸ್ವಾರಸ್ಯವಾಗಿ ಬರುತ್ತದೆ. ಇಲ್ಲಿ ಕಟ್ಟೀಮನಿಯವರು ದಿಟ್ಟತನದ ಜೊತೆಗೆ ಈ ಎಲ್ಲ ಆಮಿಷಗಳನ್ನು ಎದುರಿಸಿ ನಿಲ್ಲುವ ಹೆಣ್ಣಾಗಿ ಚಿತ್ರಿಸಿರುವುದರಿಂದ ವಿರಹದ ಚಿತ್ರಣವನ್ನು ಅವರು ತಂದಿಲ್ಲ. ಕದಳಿಯ ಕರ್ಪೂರ ಕಾದಂಬರಿಯಲ್ಲಿಯೂ ಈ ಚಿತ್ರಣ ಇಲ್ಲ.

ತರಂಗಿಣಿ ಮತ್ತು ಕದಳಿಯ ಕರ್ಪೂರ ಕಾದಂಬರಿಗಳಲ್ಲಿ ಯೌವ್ವನಾವಸ್ಥೆಯ ಅಕ್ಕನ ರೂಪವನ್ನು ಸ್ವಾರಸ್ಯಕರವಾಗಿ ವರ್ಣಿಸಿದ್ದಾರೆ. ಅಕ್ಕನ್ ರೂಪ ಮತ್ತು ವ್ಯಕ್ತಿತ್ವ ಕಣ್ಣ ಮುಂದೆ ನಿಂತಂತೆ ಭಾಸವಾಗುತ್ತದೆ. ವಿಚಾರವಂತಳಾದ ಅಕ್ಕ ದೈವದ ಸಾಕ್ಷಾತ್ಕಾರವನ್ನು ಮಾಡಿಕೊಂಡ ವಿರಾಗಿಣಿಯಾಗಿ ಚಿತ್ರಿಸಿದ್ದಾರೆ. ಆದರೆ 'ಗಿರಿಯ ನವಿಲು' ಕಾದಂಬರಿಯಲ್ಲಿ ದೈವ ಸಾಕ್ಷಾತ್ಕಾರದ ವರ್ಣನೆ ಬರುವುದಿಲ್ಲ. ಆಕೆ ಪ್ರಗತಿಪರ ವಿಚಾರವಂತ ಸ್ತ್ರೀಯಾಗಿ

ಚಿತ್ರಿಸಿದ್ದಾರೆ. ಇಲ್ಲಿ ಕಟ್ಟೀಮನಿಯವರು ವಾಸ್ತವಾಂಶಕ್ಕೆ ಹೆಚ್ಚು ಬೆಲೆಕೊಡುವ ಲೇಖಕರಾದ್ದರಿಂದ ಇಂತಹ ಅಸಹಜ ಕಲ್ಪನೆಗೆ ಅವಕಾಶಗಳನ್ನು ಕೊಟ್ಟಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಅಕ್ಕ ವೈರಾಗ್ಯನಿಧಿಯಾಗಿ ರೂಪುಗೊಳ್ಳಲು ಪ್ರೇರಕನಾದ ವ್ಯಕ್ತಿ ಕೌಶಿಕರಾಜ. ಅಕ್ಕನ ಮದುವೆಯ ವಿಷಯ ಅವಳ ಜೀವನದ ಮಹತ್ವಪೂರ್ಣ ಘಟನೆ. ಈ ವಿಷಯ ಸಾಕಷ್ಟು ಚರ್ಚೆಗಳಿಗೆ ಆಸ್ಪದವನ್ನು ಮಾಡಿಕೊಟ್ಟಿದೆ. ಕೌಶಿಕರಾಜ ಅಕ್ಕನನ್ನು ಮದುವೆ ಆಗಿದ್ದನೋ ಇಲ್ಲವೋ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಅಕ್ಕನ ವಚನಗಳನ್ನು, ಇತರ ಕಾವ್ಯಗಳನ್ನು ಆಧರಿಸಿ ಆಕೆಯ ಮದುವೆಯ ಬಗ್ಗೆ ಮಾತನಾಡಿದರೂ ಅದು ವಾಸ್ತವವಲ್ಲ. ಕಲ್ಪನೆಗಳಾಗಿದೆಯೇ ಹೊರತು ಸತ್ಯಸಂಗತಿಗೆ ದೂರಾಗಿದೆ. ಅಕ್ಕನಿಗೆ ಮದುವೆ ಆಗಿತ್ತು ಎಂದರೆ ಅವಳ ವ್ಯಕ್ತಿತ್ವಕ್ಕೆ ಕುಂದು ಬರುತ್ತದೆಂದು ಭಾವಿಸಿರುವ ಧರ್ಮಾಭಿಮಾನದ ಜನರು ಒಂದು ಕಡೆಯಾದರೆ, ಮದುವೆ ಆದುದರಿಂದ ಅವಳ ಘನತೆಗೆ ಕುಂದಿಲ್ಲ, ಆಕೆ ಮದುವೆ ಆಗಿರಲೇಬೇಕು ಎಂದು ಸಾಧಿಸುವ ಜನರು ಒಂದು ಕಡೆಗೆ ಇದ್ದಾರೆ. ಈ ಕಾರಣದಿಂದ ಮದುವೆಯ ವಿಷಯದ ಬಗ್ಗೆ ಎರಡು ಪಂಗಡಗಳೇ ಸೃಷ್ಟಿಯಾಗಿವೆ. ಈ ಭಿನ್ನಾಭಿಪ್ರಾಯದಿಂದಲೇ ಕಾದಂಬರಿಗಳಲ್ಲಿಯೂ ಏಕಮತವಿಲ್ಲ. ಲೇಖಕರ ದೃಷ್ಟಿಕೋನವನ್ನೆ ಅಕ್ಕನ ಮದುವೆಯು ಅವಲಂಬಿಸಿದೆ.

'ಕದಳಿಯ ಕರ್ಪೂರ' ಮತ್ತು 'ತರಂಗಿಣಿ' ಕಾದಂಬರಿಗಳಲ್ಲಿ ವೈಹಾಳಿಯ ಚಿತ್ರಣದ ಜೊತೆಯಲ್ಲಿ ಕೌಶಿಕ ರಾಜನ ಪ್ರಸ್ತಾಪ ಬರುತ್ತದೆ. ಗಿರಿಯನವಿಲು ಕಾದಂಬರಿಯಲ್ಲಿ ವೈಹಾಳಿಯ ನಂತರದ ಮೆರವಣಿಗೆಯಲ್ಲಿ ಬರುತ್ತದೆ. ಗಿರಿಯನವಿಲು ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಕೌಶಿಕ ರಾಜನಿಗೆ ಈಗಾಗಲೇ ಮದುವೆಯಾಗಿತ್ತು. ಆತನ ಪತ್ನಿ ಯಶೋಮತಿ ಎಂದು ಚಿತ್ರಿತವಾಗಿದೆ. ಇದಕ್ಕೆ ಆಧಾರಗಳು ಇಲ್ಲದೆ ಇದ್ದರೂ ಕೂಡ ಸಹಜ ರೀತಿಯಲ್ಲಿ ಮೂಡಿಬಂದಿದೆ. ಬಹು ಪತ್ನಿತ್ವ ಚಾಲ್ತಿಯಲ್ಲಿದ್ದ ಕಾಲದಲ್ಲಿ ಕೌಶಿಕರಾಜನಿಗೆ ಈಗಾಗಲೇ ಮದುವೆಯಾಗಿತ್ತು ಎಂಬ ಚಿತ್ರಣ ಸರಿಯಾಗಿದೆ. ಒಬ್ಬ ಸಾಮಾನ್ಯ ರಾಜನ ಗುಣಗಳ ರೀತಿಯಲ್ಲೇ ಈ ಪಾತ್ರ ಎರಡು ಕಾದಂಬರಿಗಳಲ್ಲಿ ಚಿತ್ರಿತವಾಗಿದೆ. ಆದರೆ 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಬರುವ ಕೌಶಿಕ ಅವಿವಾಹಿತ ತರುಣ. ಈತನ ಪಾತ್ರವನ್ನು ಲೇಖಕರು ಉದಾತ್ತೀಕರಿಸಿದ್ದಾರೆ. ಇಲ್ಲಿ ರಾಜ ವಯೋ ಸಹಜ ಆಸೆಯಿಂದ

ಮಹಾದೇವಿಯನ್ನು ಅಪೇಕ್ಷಿಸುತ್ತಾನೆ. ಆಕೆಯ ಮೇಲಿನ ಪ್ರೀತಿಯಿಂದಲೇ ಆಕೆಯ ಎಲ್ಲ ಷರತ್ತುಗಳಿಗೆ ಒಪ್ಪಿಗೆ ಸೂಚಿಸುತ್ತಾನೆ. ಅದಕ್ಕೆ ಬದ್ಧನಾಗಿರುವುದಕ್ಕೂ ಪ್ರಯತ್ನಿಸುತ್ತಾನೆ.

'ಗಿರಿಯ ನವಿಲು' ಕಾದಂಬರಿಯ ಪ್ರಕಾರ ಅಕ್ಕನ ಸೌಂದರ್ಯಕ್ಕೆ ಮರುಳಾದ ಕೌಶಿಕ ವಸಂತಕ ಮತ್ತು ಮುರಾರಿಯನ್ನು ಕೂಡಿಸಿ, ಮಂತ್ರಾಲೋಚಿಸಿ ಅಕ್ಕನನ್ನು ತಾನು ಮದುವೆಯಾಗ ಬಯಸುತ್ತಾನೆ. ಮುರಾರಿ ಈ ವಿಷಯದ ಒಡಂಬಡಿಕೆಗೆ ವಸಂತನನ್ನು ನಿರ್ಮಲ ಮನೆಗೆ ಕಳುಹಿಸುತ್ತಾನೆ. 'ತರಂಗಿಣಿ' ಕಾದಂಬರಿಯಲ್ಲಿ ಮುರಾರಿ ಪಾತ್ರದ ಪ್ರಸ್ತಾಪ ಇದ್ದರೂ ಆ ಪಾತ್ರವೂ ಮದುವೆಯ ವಿಷಯದಲ್ಲಿ ಪ್ರಯೋಜನಕ್ಕೆ ಬಂದಿಲ್ಲ. 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಮುರಾರಿ ಪಾತ್ರದ ಸೃಷ್ಟಿಯೇ ಇಲ್ಲ. ವಸಂತಕನೇ ಸರ್ವಾಧಿಕಾರವನ್ನು ಪಡೆದು ಮಹಾದೇವಿಯನ್ನು ಕೇಳಲು ಬರುತ್ತಾನೆ.

ಮೂರು ಕಾದಂಬರಿಯಲ್ಲಿಯೂ ಕೌಶಿಕರಾಜನಿಗೆ ಮದುವೆ ಮಾಡಿಕೊಡಲು ಅಕ್ಕನ ತಂದೆ ತಾಯಿಗಳು ಒಪ್ಪುವುದಿಲ್ಲ. ಇದಕ್ಕೆ ಕಾರಣ ಆತ ಬೇರೆ ಧರ್ಮದ ಭವಿಯಾದುದರಿಂದ, ಭಕ್ತ ಮತ್ತು ಭವಿಯ ನಡುವೆ ಸಂಬಂಧ ಏರ್ಪಡಿಸಲಾಗದೆಂದು ಹೇಳುತ್ತಾರೆ. ಕದಳಿ ಕರ್ಪೂರ ಕಾದಂಬರಿಯಲ್ಲಿ ಮಾತ್ರ ನಾವು ಶಿವಭಕ್ತ ರಾಜನಿಗೆ ಮಗಳನ್ನು ಕೊಡುವುದಿಲ್ಲವೆಂದು ಪರೋಕ್ಷವಾಗಿ ಜಾತಿಯ ಪ್ರಸ್ತಾಪ ಮಾಡಿದರೆ ಈ ಎರಡು ಕಾದಂಬರಿಯಲ್ಲಿ ನೇರವಾಗಿ ಪ್ರಸ್ತಾಪಿಸುತ್ತಾರೆ. ಮೂರು ಕಾದಂಬರಿಗಳಲ್ಲಿಯೂ ಅಧಿಕಾರದ ವಿಷಯ ಬಂದಾಗ ಅವರ ನಿರ್ಧಾರದಲ್ಲಿಯೂ ವಿಚಲಿತರಾಗುವುದಿಲ್ಲ ಎಂಬುದು ಗಮನಿಸಬೇಕಾದ ಅಂಶ.

ಮೂರು ಕಾದಂಬರಿಯಲ್ಲಿಯೂ ತನ್ನ ತಂದೆ ತಾಯಿಗಳಿಗೋಸ್ಕರವಾಗಿ ಆಕೆ ಮದುವೆಯಾಗುವ ಅಥವಾ ಅರಮನೆಗೆ ಹೋಗುವ ನಿರ್ಧಾರ ಮಾಡುತ್ತಾಳೆಂದೇ ಚಿತ್ರಣಗೊಂಡಿದೆ. ಈ ನಿರ್ಧಾರವನ್ನು ತೆಗೆದುಕೊಳ್ಳುವ ಮೊದಲು ಗುರುಗಳ ಹತ್ತಿರ ಚರ್ಚಿಸುತ್ತಾಳೆ. ಆದರೆ ಗಿರಿಯನವಿಲು ಕಾದಂಬರಿಯಲ್ಲಿ ಒಂದು ಹೆಜ್ಜೆ ಮುಂದೆ ಹೋಗಿ ಅಕ್ಕ ಮದುವೆಯ ವಿಷಯಕ್ಕೆ ಬೇರೆಯ ತಿರುವನ್ನು ನೀಡುತ್ತಾರೆ. ರಾಜನನ್ನು ಮದುವೆಯಾಗುವುದರಿಂದ ಧರ್ಮ ಪ್ರಚಾರ ಕಾರ್ಯಕ್ಕೆ ಸಹಕಾರಿಯಾಗುತ್ತದೆ. ಅಂದಿನ ಭಕ್ತರನ್ನೆಲ್ಲಾ ಉಳಿಸುವ ಸಲುವಾಗಿ ಅಕ್ಕ ಇಂತಹ ಒಂದು ನಿರ್ಧಾರಕ್ಕೆ ಬಂದಿದ್ದಳೆಂಬ ಲೇಖಕರ ಆಲೋಚನೆ ಸಮಂಜಸವಾಗಿದೆ ಮತ್ತು ವಾಸ್ತವಕ್ಕೆ ಹತ್ತಿರವಾಗಿಯೂ ಇದೆ.

ತರಂಗಿಣಿ ಕಾದಂಬರಿಯಲ್ಲಿ ಅಕ್ಕ ಮದುವೆ ಆಗಿರಲಿಲ್ಲವೆಂದು ಹೇಳುತ್ತಾರೆ. ತನ್ನ ಮದುವೆ ಜವಾಬ್ದಾರಿಯನ್ನು ತಾನೇ ನಿರ್ಧರಿಸಿಕೊಂಡು ಅರಮನೆಗೆ ಹೋಗುತ್ತಾಳೆ. ಗುರುಗಳೇ ಆಕೆಗೆ ಅರಸನಿಂದ ತಪ್ಪಿಸಿಕೊಳ್ಳುವ ಮಾರ್ಗವನ್ನು ಸೂಚಿಸುತ್ತಾರೆ. ಗಿರಿಯನವಿಲು ಕಾದಂಬರಿಯಲ್ಲಿಯೂ ಗುರುಗಳೇ ಕೆಲವು ಷರತ್ತುಗಳನ್ನು ಹಾಕುವಂತೆ ಅಕ್ಕನಿಗೆ ತಿಳಿಸುತ್ತಾರೆ. ಈ ಕರಾರುಗಳನ್ನು ನಿರ್ಮಲನೇ ಮುರಾರಿಗೆ ಹೇಳುತ್ತಾನೆ. ಆದರೆ ಕದಳಿಯ ಕರ್ಪೂರ ಕಾದಂಬರಿಯಲ್ಲಿ ಸ್ವತಃ ಅಕ್ಕನೇ ಆಲೋಚಿಸಿ ತಾನೇ ಷರತ್ತುಗಳನ್ನು ವಸಂತ ಮತ್ತು ಕೌಶಿಕರ ಮುಂದೆ ತಿಳಿಸುತ್ತಾಳೆ. ಈ ಷರತ್ತುಗಳು ಸ್ವಲ್ಪ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿ ಎಲ್ಲಾ ಕಾದಂಬರಿಗಳಲ್ಲಿಯೂ ಬಂದಿದೆ. ತರಂಗಿಣಿಯಲ್ಲಿ ಐದು ವಾರಗಳ ವ್ರತ ಕೈಗೊಂಡಿರುವುದಾಗಿಯು, ಅದು ಮುಗಿದ ನಂತರ ಮದುವೆ ಪ್ರಸ್ತಾಪ ಎನ್ನುವ ಹೊಸ ಸೇರ್ಪಡೆಯಿದೆ. ಹಾಗೆಯೇ ಈ ಕಾದಂಬರಿಯಲ್ಲಿ ಅಕ್ಕ ಗುರುಗಳ ಹತ್ತಿರ ಹೋಗಿದ್ದಾಗ ವಸಂತಕ ಬಂದು ಓಂಕಾರ ಲಿಂಗಮ್ಮರನ್ನು ಮದುವೆಯ ವಿಷಯ ಕುರಿತು ಹೇಳುತ್ತಾನೆ. ಅವರು ತಮ್ಮ ನಿಲುವಿನಿಂದ ಸ್ವಲ್ಪವೂ ಕದಲದೆ ಇದ್ದಾಗ, ರಾಜಾಜ್ಞೆಯ ಉಲ್ಲಂಘನೆ ಮೇರೆಗೆ ಬಂಧಿಸಿ ಅರಮನೆಗೆ ಕರೆದೊಯ್ಯುತ್ತಾನೆ. ಈ ಬಂಧಿಸುವ ಸನ್ನಿವೇಶ ಕಾದಂಬರಿಕಾರ್ತಿಯ ಸ್ವಕಲ್ಪಿತವಾಗಿದೆ. ಯಾವ ಪ್ರಾಚೀನ ಕಾವ್ಯ ಕೃತಿಗಳಲ್ಲಿಯೂ ಮತ್ತು ಉಳಿದೆರಡು ಕಾದಂಬರಿಯಲ್ಲಿ ಇದರ ಪ್ರಸ್ತಾಪವಿಲ್ಲ.

'ಗಿರಿಯನವಿಲು' ಕಾದಂಬರಿಯಲ್ಲಿ ಮೂರು ಕರಾರುಗಳಿಗೆ ಒಪ್ಪಿದ ಕೌಶಿಕ ಲಿಖಿತ ಪತ್ರ ಬರೆದುಕೊಡುತ್ತಾನೆ. ಈ ಪತ್ರವನ್ನು ಪಡೆದುಕೊಂಡೇ ಅಕ್ಕ ಕೊಡಲ್ಪಟ್ಟ ಕಾವಿ ವಸ್ತ್ರ ಧರಿಸಿ ತಾನೂ ಪ್ರತ್ಯೇಕವಾಗಿ ಕಲ್ಯಾಣಕ್ಕೆ ಹೋಗುವುದಾಗಿ ತಿಳಿಸುತ್ತಾನೆ. ಈ ವಿಷಯ ಎರಡೂ ಕಾದಂಬರಿಗಳಿಂತ ಹೊಸದಾಗಿದೆ. ಹೀಗೆ ನಾರುಡೆಯುಟ್ಟ ಏಕಾಂಗಿಯಾಗಿ ಕಲ್ಯಾಣದತ್ತ ಸಾಗಿದಳು ಎಂದು 'ಕದಳಿಯ ಕರ್ಪೂರ' ದಲ್ಲಿ ಚಿತ್ರಿತವಾಗಿದೆ. ದಿಗಂಬರಳಾಗಿ ಚಂದಿಮದೇವನೊಡನೆ 'ಗಿರಿಯನವಿಲು' ಕಾದಂಬರಿಯಲ್ಲಿ ಚಿತ್ರಿತಗೊಂಡಿದೆ. ದಿಗಂಬರಳಾಗಿ ಏಕಾಂಗಿಯಾಗಿ ತರಂಗಿಣಿಯಲ್ಲಿ ಅಕ್ಕ ಉಡುತಡಿ ಬಿಟ್ಟು ಕಲ್ಯಾಣದತ್ತ ಹೋಗುತ್ತಾಳೆ.

ಒಟ್ಟಾರೆಯಾಗಿ ಅಕ್ಕ ಕಲ್ಯಾಣದತ್ತ ಹೊರಟಳು ಎಂಬುದು ಈ ಮೂರು ಕಾದಂಬರಿಗಳಲ್ಲಿಯೂ ಸ್ಪಷ್ಟವಾಗಿ ಮೂಡಿಬಂದಿದೆ. ಆದರೆ ದಿಗಂಬರಳಾಗಿ ಹೊರಟಳೋ ಶ್ವೇತಾಂಬರಿಯಾಗಿ ಹೊರಟಳೋ ಎಂಬುದಕ್ಕೆ ಏಕಾಭಿಪ್ರಾಯವಿಲ್ಲ. ಸಂಪ್ರದಾಯ ಬದ್ಧ

ಮನಸ್ಸುಗಳು ಇದಕ್ಕೆ ಒಪ್ಪುವುದಿಲ್ಲ. ಆದರೆ ಅಂದು ಜೈನಧರ್ಮದಲ್ಲಿ ಇಂತಹ ಒಂದು ಪದ್ಧತಿ ಇತ್ತು, ಈ ಧರ್ಮದ ಪ್ರಭಾವವು ಆಗಿರಬಹುದೆಂದು ಊಹಿಸಲು ಸಾಧ್ಯತೆ ಇದೆ.

## ಉಡುತಡಿಯಿಂದ ಕಲ್ಯಾಣಕ್ಕೆ

ಅರಮನೆಯನ್ನು ತೊರೆದ ಅಕ್ಕ ಕಲ್ಯಾಣಕ್ಕೆ ಹೊರಟಳು ಎಂಬುದು ನಿರ್ವಿವಾದ ಸಂಗತಿ ಆದರೆ ಉಡುತಡಿಯಿಂದ ಕಲ್ಯಾಣದವರೆಗೆ ಹೇಗೆ ಸಾಗಿದಳು ಎಂಬ ವಿಷಯ ಕಾದಂಬರಿಕಾರರ ಸ್ವಕಲ್ಪಿತವಾಗಿದೆ. ಮೂರು ಕಾದಂಬರಿಗಳಲ್ಲಿಯೂ ಈ ಸನ್ನಿವೇಶ ಭಿನ್ನ ಭಿನ್ನ ರೀತಿಯಲ್ಲಿ ಚಿತ್ರಿಸಿದ್ದಾರೆ. ಇಂದಿನ ಸಮಾಜದಲ್ಲಿ ಸಕಲ ಸವಲತ್ತುಗಳಿದ್ದಾಗ್ಯೂ ಒಬ್ಬ ಹೆಣ್ಣು ಮಗಳು ಪಯಣಿಸುವುದು ದುಸ್ತರವಾಗಿರುವಾಗ, ಇನ್ನೂ ೧೨ ನೇ ಶತಮಾನದಲ್ಲಿ ಆ ಹೆಣ್ಣು ಮಗಳು ಯಾವ ರೀತಿಯ ಕಷ್ಟ ನಷ್ಟಗಳನ್ನು ಎದುರಿಸಿದಳು. ಅವಳ ರಕ್ಷಣೆಗೆ ಯಾರು ಬಂದರು ಎಂಬ ಪ್ರಶ್ನೆಗಳು ಕಾಡದಿರಲಾರವು. ಇವುಗಳಿಗೆ ಉತ್ತರೋಪಾದಿಯೆಂಬಂತೆ ಸನ್ನಿವೇಶಗಳನ್ನು ಸೃಷ್ಟಿಸಿದ್ದಾರೆ ನಮ್ಮ ಕಾದಂಬರಿಕಾರರು.

'ಗಿರಿಯನವಿಲು' ಕಾದಂಬರಿಯ ಅಕ್ಕ ಅರಮನೆಯನ್ನು ಬಿಟ್ಟು ಹೊರಬಿದ್ದಾಗ ಉಡುತಡಿಯಲ್ಲಿರುವ ಶಿವಭಕ್ತರೆಲ್ಲ ಹೊತ್ತು ಮುಳುಗುವುದರಲ್ಲಿಯೇ ಊರು ಬಿಟ್ಟು ಹೊರಡಬೇಕೆಂದು ಆಜ್ಞೆಯನ್ನು ಹೊರಡಿಸುತ್ತಾನೆ. ಶಿವಭಕ್ತರ ಕುಟುಂಬಗಳೆಲ್ಲ ಅಕ್ಕನನ್ನು ಶಪಿಸುತ್ತಲೇ ಕಲ್ಯಾಣದತ್ತ ಸಾಗುತ್ತದೆ. ಈ ಗುಂಪಿನ ಜೊತೆಯಲ್ಲಿ ಚಂದಿಮದೇವ ಮತ್ತು ಅಕ್ಕ ಜೊತೆಯಾಗಿ ಕಲ್ಯಾಣಕ್ಕೆ ಹೊರಡುತ್ತಾರೆ.

'ಕದಳಿಯ ಕರ್ಪೂರ' ಕಾದಂಬರಿಯ ಅಕ್ಕ ಒಬ್ಬಳೇ ಕಲ್ಯಾಣದತ್ತ ಸಾಗುತ್ತಾಳೆ. ದಾರಿಯಲ್ಲಿ ಶಿವಭಕ್ತರ ಕುಟುಂಬವು ಜೊತೆಯಾಗುತ್ತದೆ. ಅವರ ಜೊತೆಯಲ್ಲಿ ಸಾಗಿದ ಅಕ್ಕ ಮುಂದೆ ಅವರ ಊರನ್ನು ಬೀಳ್ಕೊಂಡು ಮುಂದಿನ ಪಯಣ ಬೆಳೆಸುತ್ತಾಳೆ. ಪಾಳು ದೇಗುಲದಲ್ಲಿ ಕಪಟ ಸಂನ್ಯಾಸಿಯ ಮೋಸಕ್ಕೆ ಬಲಿಯಾಗುವುದರಲ್ಲಿ ಇದ್ದ ಅಕ್ಕನಿಗೆ ಸಂಗಮದೇವರು ಪ್ರತ್ಯೇಕ್ಷವಾಗಿ ಸಹಾಯಕ್ಕೆ ಬರುತ್ತಾನೆ. ಅಲ್ಲಿಂದ ಮುಂದೆ ಕಲ್ಯಾಣದವರೆಗೂ ಜೊತೆಗೆ ಬರುತ್ತಾನೆಂದು ಚಿತ್ರಿಸಿದ್ದಾರೆ. ಇದು ಸಿನಿಮೀಯ ಮಾದರಿಯಾಗಿದೆ. ಅಕ್ಕ ಒಬ್ಬಳೇ ಕಲ್ಯಾಣಕ್ಕೆ ಸಾಗಿದಳು ಎಂಬುದರ ಬದಲಾಗಿ ಈ ತಂತ್ರ ಬಳಸಿದ್ದಾರೆ.

'ಗಿರಿಯ ನವಿಲು' ಕಾದಂಬರಿಯಲ್ಲಿ ಅಕ್ಕ ಅರಮನೆಗೆ ಹೋಗುವ ಮುನ್ನ ಲಿಖಿತ ಕರಾರನ್ನು ಮಾಡಿಕೊಂಡಿರುತ್ತಾಳೆ. ಈ ಲಿಖಿತ ಪತ್ರದ ವಿಷಯ ಉಳಿದೆರಡು

ಕಾದಂಬರಿಯಲ್ಲಿ ಬರುವುದಿಲ್ಲ. ಈ ಕಾದಂಬರಿಯಲ್ಲಿ ಅಕ್ಕ ಸಕಲ ವೈಭವವನ್ನು ಅನುಭವಿಸುತ್ತಾಳೆ. ಭಂಡಾರದ ಬೀಗದಕೈ ಅವಳ ಬಳಿಯೇ ಇರುತ್ತದೆ. ಅಕ್ಕ ಕೌಶಿಕನೊಂದಿಗೆ ಒಲ್ಲದ ಸಂಸಾರವನ್ನು ಮಾಡುತ್ತಾಳೆ. ಕೌಶಿಕನನ್ನು ಅತಿಕಾಮಿಯಾಗಿ ಚಿತ್ರಿಸಿದ್ದಾರೆ. ಕೌಶಿಕ ರಾಜ್ಯಾಡಳಿತದಲ್ಲಿ, ಹೆಂಡತಿ ಯಶೋಮತಿಯಲ್ಲಿ ಆಸಕ್ತಿ ಕಳೆದುಕೊಂಡು ಅಕ್ಕನಿಗಾಗಿ ಹಾತೊರೆಯುತ್ತಾನೆ. ಇದನ್ನು ಸ್ವಲ್ಪ ಅತಿಯಾಗಿಯೇ ಕಟ್ಟೀಮನಿಯವರು ಚಿತ್ರಿಸಿದ್ದಾರೆ. ತರಂಗಿಣಿ ಮತ್ತು ಕದಳಿ ಕರ್ಪೂರ ಕಾದಂಬರಿಯಲ್ಲಿ ಅಕ್ಕ ಕೌಶಿಕನ ಅರಮನೆಗೆ ಹೋದರೂ ದೈಹಿಕ ಸುಖಕ್ಕೆ ಅವಕಾಶ ಕೊಟ್ಟಿರುವುದಿಲ್ಲವೆಂದು ಚಿತ್ರಿಸುತ್ತಾರೆ. ಮಾತೆ ಮಹಾದೇವಿ ಮತ್ತು ತಿಪ್ಪೇರುದ್ರಸ್ವಾಮಿಯವರ ಸಂಪ್ರದಾಯಬದ್ಧ ಮನಸ್ಸು ಅಕ್ಕ ಮದುವೆಯಾಗಿದ್ದಳು ಎಂಬ ವಿಷಯವನ್ನು ಸ್ವೀಕರಿಸಲು ಸಿದ್ಧವಿಲ್ಲ. ಕಟ್ಟೀಮನಿಯವರು ವಾಸ್ತವವನ್ನು ಪುರಸ್ಕರಿಸುವ ಪ್ರಗತಿ ಶೀಲ ಲೇಖಕರಾದ್ದರಿಂದ ಅಕ್ಕ ಮದುವೆಯಾಗಿದ್ದಳು ಎಂಬ ಅಂಶಕ್ಕೆ ಹೆಚ್ಚು ಒತ್ತು ಕೊಡುತ್ತಾರೆ.

ಕೌಶಿಕ ತಾನು ಒಪ್ಪಿಕೊಂಡ ಮೂರು ಷರತ್ತುಗಳನ್ನು ಮುರಿದಾಗ ಅರಮನೆಗೆ ಬಂದ ಅಕ್ಕನ ಬಿಡುಗಡೆ. ಈ ಷರತ್ತುಗಳ ಉಲ್ಲಂಘನೆ ಪ್ರಸ್ತಾಪ ಕಾದಂಬರಿಗಳಲ್ಲಿ ಬೇರೆ ಬೇರೆ ಸನ್ನಿವೇಶಗಳಲ್ಲಿ ಬಂದಿದೆ. ತಾನು ಒಪ್ಪಿಕೊಂಡ ಷರತ್ತುಗಳನ್ನು ಕೌಶಿಕ ತಾನೇ ಮುರಿಯುತ್ತಾನೆ. ಅಕ್ಕನ ಸಂಗ ಸಿಗದ ಕೌಶಿಕನ ಅತೃಪ್ತಿ ಅದು ಕೋಪವಾಗಿ ಪರಿವರ್ತಿತವಾಗುವುದರ ಮೂಲಕ ಸೇಡಿ ತೀರಿಸಿಕೊಳ್ಳುತ್ತಾನೆ. ಅದು ಎಲ್ಲ ಕಾದಂಬರಿಗಳಲ್ಲಿಯೂ ಸಮಾನವಾಗಿ ಮೂಡಿಬಂದಿದೆ. ಕದಳಿ ಕರ್ಪೂರ ಕಾದಂಬರಿಯಲ್ಲಿ ಶಿವಪೂಜೆಯಲ್ಲಿ ತಲ್ಲೀನಳಾಗಿದ್ದ ಅಕ್ಕನನ್ನು ಕಾಮಿಸಿದಾಗ ಅಕ್ಕ ತನ್ನ ವಸ್ತ್ರವನ್ನು ತಾನೇ ಬಿಸುಟುಹೋಗುತ್ತಾಳೆ. ಆದರೆ ತರಂಗಿಣಿ ಮತ್ತು ಗಿರಿಯನವಿಲು ಕಾದಂಬರಿಗಳಲ್ಲಿ ಗುರುವನ್ನು ನೋಡಲು ಬಂದ ಅಕ್ಕನ ಸೆರಗನ್ನು ಹಿಡಿದು ಎಳೆಯುತ್ತಾನೆ. ಅಕ್ಕ ಈ ಸೆರಗಿನ ಹಂಗು ತನಗಿಲ್ಲ ಎಂದು ದಿಗಂಬರೆಯಾಗಿ ಅರಮನೆಯಿಂದ ಹೊರಡುತ್ತಾಳೆ.

ಅಕ್ಕ ಅರಮನೆಯಿಂದ ಹೊರಡುವಾಗ ದಿಗಂಬರೆಯಾಗಿ ಹೊರಟಳು ಎಂಬುದು ಮೂರು ಕಾದಂಬರಿಯಲ್ಲಿಯೂ ವ್ಯಕ್ತವಾಗುತ್ತದೆ. ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಅಕ್ಕ ದಿಗಂಬರಳಾಗಿ ಗುರುಗಳ ಮಠಕ್ಕೆ ಹೋಗುತ್ತಾಳೆ. ಗುರುಗಳ ಒತ್ತಾಯದ ಮೇರೆಗೆ ಮಹಾದೇವಿ ನಾರುಡೆಯನ್ನು ಉಡುತ್ತಾಳೆ ಎಂಬ ವಿಷಯ ಕದಳಿಯ ಕರ್ಪೂರ ಕಾದಂಬರಿಯಲ್ಲಿ ಬರುತ್ತದೆ. ಈ ವಿಷಯ ಇನ್ನುಳಿದ ಕಾದಂಬರಿಗಳಲ್ಲಿ

ಬರುವುದಿಲ್ಲ. ಅಕ್ಕ ತನ್ನ ಬಂಧು ಬಾಂಧವರೆಲ್ಲರೂ ಉಡುತಡಿಯಲ್ಲಿಯೇ ಉಳಿಸಿಕೊಳ್ಳಲು ಪ್ರಯತ್ನಿಸುವ ಚಿತ್ರಣ ಮೂರು ಕಾದಂಬರಿಗಳಲ್ಲಿ ಸಮಾನವಾಗಿ ಮೂಡಿಬಂದಿದೆ. ಕದಳಿಯ ಕರ್ಪೂರದ ರಸವಂತಿ 'ತರಂಗಿಣಿ' ಕಾದಂಬರಿಯ ಶಿವ ಕಾಮಿನಿಯರು ಮಹಾದೇವಿಯ ಜೊತೆ ಬರುವುದಾಗಿ ಕೇಳಿಕೊಳ್ಳುತ್ತಾರೆ. ಇದಕ್ಕೆ ಅಕ್ಕ ಒಪ್ಪುವುದಿಲ್ಲ. ಈ ವಿಷಯ 'ಗಿರಿಯನವಿಲು' ಕಾದಂಬರಿಯಲ್ಲಿ ಬರುವುದಿಲ್ಲ. ತರಂಗಿಣಿಯಲ್ಲಿ ವಸಂತಕನು ತನ್ನ ಪಾಪವನ್ನು ಅರಿತುಕೊಂಡು ಅಕ್ಕನನ್ನು ತನ್ನ ಗುರುವೆಂದು ಭಾವಿಸುತ್ತಾನೆ. ತರಂಗಿಣಿ ಕಾದಂಬರಿಯಲ್ಲಿ ಅಕ್ಕ ದಿಗಂಬರಳಾಗಿ ಉಡುತಡಿಯ ದಾಟಿ ಮುಂದಿನ ಹಳ್ಳಿಗೆ ಬರುತ್ತಾಳೆ. ಬಾಯಾರಿಕೆಯಿಂದ ಬಾವಿಯ ಬಳಿ ಬಂದಾಗ ಹೆಂಗಳೆಯರು ಭಾವಿಸುವ ಪರಿ. ಹುಡುಗರ ಗುಂಪು ನಡೆದುಕೊಳ್ಳುವ ರೀತಿ ಈ ಎಲ್ಲವು ಹೃದಯವಿದ್ರಾವಕವಾಗಿ ಚಿತ್ರಿತಗೊಂಡು ಕಾದಂಬರಿಯಲ್ಲಿ ಸೊಗಸಾಗಿ ಮೂಡಿಬಂದಿದೆ. ಸ್ಮಶಾನದಲ್ಲಿ ನಾಯಿ ನರಿಗಳು ತಿನ್ನಲು ಬರುವಾಗ ಅಕ್ಕ ಚನ್ನಮಲ್ಲಿಕಾರ್ಜುನನಿಗೆ ಪೂರ್ಣ ಶರಣು ಹೋಗಿ ಧ್ಯಾನಾಸಕ್ತದಲ್ಲಿ ಕುಳಿತುಕೊಳ್ಳುತ್ತಾಳೆಂದು ಚಿತ್ರಿಸಿರುವ ಸನ್ನಿವೇಶ ವಾಸ್ತವತೆಗೆ ದೂರಾಗಿದೆ. ಶ್ಮಶಾನದಲ್ಲಿ ಮೈಕೊರೆಯುವ ಚಳಿಯಿಂದ ಶವದ ಮೇಲಿನ ಸೀರೆಯನ್ನು ಹೊದೆದುಕೊಳ್ಳುತ್ತಾಳೆಂದು ಹೇಳುವ ಸನ್ನಿವೇಶಗಳು ಹೃದಯ ಸ್ಪರ್ಶಿಯಾಗಿದೆ. ಬಹುಶಃ ಮಾತೆ ಮಹಾದೇವಿಯವರ ದ್ವಂದ್ವತೆಯನ್ನು ಇದು ತಿಳಿಸುತ್ತದೆ. ಅಕ್ಕ ಶ್ವೇತಾಂಬರಿಯಾದಳು ಎನ್ನುವುದರ ಸೂಚನೆಯನ್ನು ಕೊಟ್ಟಿರಬಹುದು.

ಇನ್ನೂ ಎಲ್ಲವನ್ನು ತೊರೆದುಹೋದ ಅಕ್ಕ ಜೀವನೋಪಾಯಕ್ಕಾಗಿ ಏನು ಮಾಡಿದಳೆಂದು ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಭಿಕ್ಷೆ ಬೇಡುವ ಸನ್ನಿವೇಶವನ್ನು ನಿರ್ಮಾಣಮಾಡಿದ್ದಾರೆ. ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಈ ಭಿಕ್ಷೆ ಬೇಡುವ ಸನ್ನಿವೇಶ ಕದಳಿಯ ಕರ್ಪೂರಕ್ಕಿಂತ ತರಂಗಿಣಿ ಕಾದಂಬರಿಯಲ್ಲಿ ತೀವ್ರವಾಗಿ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಇಲ್ಲಿ ಮನಸ್ಸಿನ ಆಳದಲ್ಲಿ ಹುದುಗಿದ್ದ ನೋವು, ಅಹಂಗಳ ಚಿತ್ರಣ ಸೊಗಸಾಗಿ ಮೂಡಿದೆ. ಮಾನಸಿಕ ವಿಶ್ಲೇಷಣೆಯು ಆಳಕ್ಕೆ ಇಳಿಯುತ್ತದೆ ತರಂಗಿಣಿ ಕಾದಂಬರಿಯಲ್ಲಿ. ಆದರೆ ಗಿರಿಯನವಿಲು ಕಾದಂಬರಿಯಲ್ಲಿ ಈ ಯಾವ ಸನ್ನಿವೇಶಗಳು ಇಲ್ಲ. ಅಕ್ಕ ಭಿಕ್ಷೆಬೇಡಲು ನೇರವಾಗಿ ಬೀದಿಗೆ ಬರುವುದಿಲ್ಲ. ಭಕ್ತರೇ ಭಿಕ್ಷೆಯನ್ನು ತಂದು ಕೊಡುತ್ತಾರೆ. ಬಸವನ ಆದರ್ಶವನ್ನು ಪಾಲಿಸಹೊರಟ ಅಕ್ಕನಿಗೆ ಬಿಟ್ಟಿ

ಕೂಳು ತಿನ್ನುವ ಪ್ರಸಂಗ ಎದುರಾಯಿತಲ್ಲ ಎಂದು ಕೊರಗುತ್ತಾಳೆಂಬ ಚಿತ್ರಣವನ್ನು ಕಟ್ಟೀಮನಿಯವರು ನೀಡುತ್ತಾರೆ.

'ಗಿರಿಯ ನವಿಲು' ಕಾದಂಬರಿಯ ಅಕ್ಕನ ಮೇಲೆ ಕಾಮುಕರ ಕಣ್ಣುಬೀಳುವುದಿಲ್ಲ. ಇದಕ್ಕೆ ಕಾರಣ ಚಂದಿಮದೇವ ಜೊತೆಗಿರುತ್ತಾನೆ. ಆದರೆ ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಯಲ್ಲಿ ಈ ತರಹದ ಒಂದು ಸಮಸ್ಯೆಯನ್ನು ಆಕೆ ಎದುರಿಸುತ್ತಾಳೆ. 'ಗಿರಿಯನವಿಲು' ಮತ್ತು 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಅಕ್ಕನ ರಕ್ಷಣೆಗೆ ಒಬ್ಬ ಪುರುಷ ಇರುತ್ತಾನೆಂದು ಕಾದಂಬರಿಕಾರರು ಚಿತ್ರಿಸಿದ್ದಾರೆ. ಎಲ್ಲವನ್ನು ತೊರೆದು ದಿಟ್ಟತನದಿಂದ ಹೊರಟ ಅಕ್ಕ ಈ ತರಹದ ಆಶ್ರಯವನ್ನು ಬಯಸಿದ್ದಳೇ ಎನಿಸುತ್ತದೆ. ಅದರಲ್ಲೂ ಕಟ್ಟೀಮನಿಯವರು ಪ್ರಗತಿಪರ ಮಹಿಳೆಯಂತೆ ಛಲಗಾರ್ತಿ, ಧೈರ್ಯವಂತೆ ಎಂದೆಲ್ಲಾ ಚಿತ್ರಿಸಿದ್ದಾರೆ. ಇದಕ್ಕಿಂತ ಭಿನ್ನವಾದ ದೃಷ್ಟಿಯಲ್ಲಿ ಮಾತೆ ಮಹಾದೇವಿಯವರು ಚಿತ್ರಿಸಿದ್ದಾರೆ. ಏಕೆಂದರೆ ಲೇಖಕರು ಅಕ್ಕನ ಮನಸ್ಸಿನ ಆಳಕ್ಕೆ ಇಳಿಯದೇ ಅಬಲೆ ಎಂಬಂತೆ ನಿರೂಪಿಸಿದ್ದಾರೆ.

'ತರಂಗಿಣಿ' ಕಾದಂಬರಿಯಲ್ಲಾದರೆ ಅಕ್ಕ ಭಿಕ್ಷೆಗೆ ಹೋದಾಗ ಅನೇಕ ಗೃಹಸ್ಥರು ವಕ್ರದೃಷ್ಟಿಯಿಂದ ನೋಡಿ ತಮ್ಮ ಮನೆಯಲ್ಲಿ ಕೆಲಸ ಕೊಡುವುದಾಗಿ ಆಸೆ ತೋರಿಸುತ್ತಾರೆ. ತರುಣರ ಗುಂಪು ಪ್ರಣಯಗೀತೆ ಹಾಡುತ್ತ ಬೆನ್ನು ಹತ್ತುತ್ತಾರೆ. ಜೊತೆಗೆ ಬೈರಾಗಿಯೊಬ್ಬನ ಸನ್ನಿವೇಶದಿಂದ ಅಕ್ಕ ದೈಹಿಕವಾಗಿ ಅಷ್ಟೊಂದು ಬಲಿಷ್ಟಳು ಎಂಬುದಾಗಿ ಚಿತ್ರಿಸಿದ್ದಾರೆ. ಉಳಿದ ಕಾದಂಬರಿಯಲ್ಲಿ ಈ ಅಂಶ ಇಲ್ಲ. ಮಾತೆ ಮಹಾದೇವಿಯುವರು ಆಕೆ ಸಬಲೆ ಎಂಬುದನ್ನು ಮನದಟ್ಟು ಮಾಡಿಕೊಡಲು ಈ ಸನ್ನಿವೇಶಗಳನ್ನು ಸೃಷ್ಟಿಸಿದ್ದಾರೆ. ಜೊತೆಗೆ ಈ ಕಾದಂಬರಿಯಲ್ಲಿ 'ನಿಂದಕರಿಗೆ ನೀತಿಬೋಧೆ', 'ಮಹಾಗ್ರಾಮದಲ್ಲಿ ಮಹಾದೇವಿ' ಎಂಬ ಎರಡು ಸನ್ನಿವೇಶಗಳು ಇನ್ನುಳಿದ ಕಾದಂಬರಿಗಳಿಗೆ ಸಂಪೂರ್ಣ ಹೊಸದಾದ ಸನ್ನಿವೇಶಗಳಾಗಿವೆ. 'ತರಂಗಿಣಿ' ಮತ್ತು 'ಕದಳಿಯ ಕರ್ಪೂರ' ಕಾದಂಬರಿಗಳಲ್ಲಿ ಕಲ್ಯಾಣಕ್ಕೆ ಸಮೀಪದ ಪ್ರತಿ ಹಳ್ಳಿಗಳಲ್ಲಿ ದಾಸೋಹ ಧಾಮಗಳಿದ್ದುದರ ಚಿತ್ರಣ ಹಾಗೂ ಅವು ಸೋಮಾರಿಗಳು ವಾಸಿಸುವ ಸ್ಥಳಗಳಾಗಿರಲಿಲ್ಲ ಎಂಬ ವಿಷಯ ಎರಡೂ ಕಾದಂಬರಿಗಳಲ್ಲಿಯೂ ಸಮಾನವಾಗಿ ಬಂದಿದೆ.

ಒಟ್ಟಾರೆಯಾಗಿ ಈ ಮೂರು ಕಾದಂಬರಿಗಳಲ್ಲಿಯೂ ಅಕ್ಕ ಒಬ್ಬಳೇ ಕಲ್ಯಾಣಕ್ಕೆ ಹೋಗಲಿಲ್ಲ. ಅವಳಿಗೆ ಜೊತೆಗಾರರು ಅಥವಾ ಯಾತ್ರಿಕರು ಇದ್ದರು ಎಂಬುದನ್ನು ತಿಳಿಸುತ್ತದೆ. ಈ ಅಂಶ ವಾಸ್ತವವನ್ನು ಪುರಸ್ಕರಿಸುತ್ತದೆ. ಸತ್ಯಕ್ಕೆ ಹತ್ತಿರವಾದ

ವಿಚಾರವಾಗಿದೆ. ಕಲ್ಯಾಣಕ್ಕೆ ಬಂದ ಅಕ್ಕ ಅಲ್ಲಿಯೇ ಕೆಲ ಕಾಲ ನೆಲೆಸಿದಳು. ಆದರೆ ಎಷ್ಟು ಕಾಲದವರೆಗೆ ಎಂಬುದು ಖಚಿತವಾಗಿಲ್ಲ.

## ಕಿನ್ನರಿ ಬ್ರಹ್ಮಯ್ಯನ ಪ್ರಸಂಗ

ಬ್ರಹ್ಮಯ್ಯನ ಬಗ್ಗೆ ಪ್ರಾಚೀನ ಕೃತಿಗಳಲ್ಲಿ ಭಿನ್ನಾಭಿಪ್ರಾಯಗಳಿರುವಂತೆ ಈ ಕಾದಂಬರಿಗಳಲ್ಲಿಯೂ ಒಮ್ಮತವಾದ ಅಭಿಪ್ರಾಯವಿಲ್ಲ. ಕಾರಣ ಈ ಕಾದಂಬರಿಕಾರರು ಯಾವ ಪ್ರಾಚೀನ ಕೃತಿಯನ್ನು ಆಕರವಾಗಿಟ್ಟುಕೊಂಡು ಕಾದಂಬರಿ ರಚಿಸಿದ್ದಾರೆಂಬುದರ ಇದು ಮೇಲೆ ಅವಲಂಬಿಸಿದೆ.

ಹರಿಹರನ ರಗಳೆಯ ಪ್ರಕಾರ ಕಿನ್ನರಯ್ಯ ಅಕ್ಕನನ್ನು ಸಂಧಿಸುವುದು ಶ್ರೀಶೈಲದಲ್ಲಿ_ ಆದರೆ ಗಿರಿಯನವಿಲು ಕಾದಂಬರಿಯಲ್ಲಿ ಈತನ ಪ್ರಸ್ತಾಪವಿಲ್ಲ. ಉಳಿದ ಕಾದಂಬರಿಯಲ್ಲಿ ಕಲ್ಯಾಣವನ್ನು ಪ್ರವೇಶಿಸಿದಾಗ ಕಿನ್ನರಯ್ಯ ಎದುರಾಗುತ್ತಾನೆ. ಇಲ್ಲಿ ಚಂದಿಮದೇವನೊಡನೆ ಬರುವುದರಿಂದ ಅಕ್ಕನನ್ನು ಪರೀಕ್ಷಿಸುವ ಸನ್ನಿವೇಶ ಇಲ್ಲ. ಈ ಸನ್ನಿವೇಶದ ಚಿತ್ರಣಕ್ಕೆ ಚಂದಿಮದೇವನ ಪಾತ್ರ ಅಡ್ಡಿಯಾಗಿದೆ.

'ಕದಳಿಯ ಕರ್ಪೂರ' ಕಾದಂಬರಿಯ ಪ್ರಕಾರ ಅಕ್ಕ ಏಕಾಂಗಿಯಾಗಿ ಸಾಯಂಕಾಲದ ಸಮಯಕ್ಕೆ ಕಲ್ಯಾಣ ನಗರವನ್ನು ಪ್ರವೇಶಿಸುತ್ತಾಳೆ. ಈ ಬರುವಿಕೆ ಬಸವನಿಗೆ ಮೊದಲೇ ತಿಳಿದಿರುತ್ತದೆ. ಅವಳು ದೂರದಿಂದ ಬರುವುದನ್ನು ಗಿಡದ ಮರೆಯಲ್ಲಿ ನಿಂತು ನೋಡುತ್ತಿದ್ದ ಕಿನ್ನರಯ್ಯ ಆಕೆ ಸಮೀಪಿಸುತ್ತಿದ್ದಂತೆ ಕಾಲಿಗೆ ಬಿದ್ದು ಕ್ಷಮಿಸುವಂತೆ ಕೇಳಿಕೊಳ್ಳುತ್ತಾನೆ. ಅಕ್ಕ ಆತನನ್ನು ವಿಚಾರಿಸಿದಾಗ ಬಸವಣ್ಣನವರು ಅಕ್ಕನನ್ನು ಗುರುತಿಸಿ ಕರೆದುಕೊಂಡು ಬರುವಂತೆ ಕಿನ್ನರಯ್ಯನಿಗೆ ಹೇಳಿರುತ್ತಾರೆ. ಆದರೆ ಕಿನ್ನರಯ್ಯ ತರುಣಿ, ರೂಪವತಿಯಾದ ಅಕ್ಕನನ್ನು ಮೋಹದ ದೃಷ್ಟಿಯಿಂದ ಚಂಚಲಗೊಳಿಸಬೇಕೆಂದು ಮನಸ್ಸಿನಲ್ಲೇ ನಿರ್ಧರಿಸಿಕೊಂಡಿರುತ್ತಾನೆ. ಆದರೆ ಈ ಘಟನೆಯಿಂದ ಇಬ್ಬರಲ್ಲಿಯೂ ಸಹೋದರ – ಸಹೋದರಿ ಸಂಬಂಧವೇರ್ಪಟ್ಟು ಕಿನ್ನರಯ್ಯ ಅಕ್ಕನನ್ನು ಅನುಭವಮಂಟಪಕ್ಕೆ ಕರೆದೊಯ್ಯುತ್ತಾನೆ.

ತರಂಗಿಣಿ ಕಾದಂಬರಿಯಲ್ಲಿ ಈ ಸನ್ನಿವೇಶದ ಚಿತ್ರಣ, ಉಳಿದೆರಡು ಕಾದಂಬರಿಗಳಿಂತ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿದೆ. ಇಲ್ಲಿ ಪ್ರಭುದೇವರು ಅಕ್ಕನ ವೈರಾಗ್ಯವನ್ನು ಪರೀಕ್ಷಿಸಿ ಲೋಕಕ್ಕೆ ತಿಳಿಸುವ ಉದ್ದೇಶದಿಂದ ಕಿನ್ನರಿ ಬ್ರಹ್ಮಯ್ಯನನ್ನು

ಪರೀಕ್ಷೆಗಾಗಿ ಕಳುಹಿಸಿತ್ತಾರೆ. ಇದಕ್ಕೆ ಬಸವಣ್ಣನ ಒಪ್ಪಿಗೆಯು ಇರುತ್ತದೆಂದು ಕಾದಂಬರಿಕಾರ್ತಿ ಚಿತ್ರಿಸುತ್ತಾರೆ.

## ಕಲ್ಯಾಣದಲ್ಲಿ ಅಕ್ಕ

ಕದಳಿಯ ಕರ್ಪೂರದ ಪ್ರಕಾರ ಅಕ್ಕ ಅನುಭವಮಂಟಪಕ್ಕೆ ಬಂದಾಗ ಮೈ ಮೇಲೆ ಚಿಂದಿಯಾದ ನಾರುಡೆಯನ್ನು ಹೊಂದಿರುತ್ತಾಳೆ. 'ಗಿರಿಯ ನವಿಲು' ಮತ್ತು 'ತರಂಗಿಣಿ' ಕಾದಂಬರಿಗಳ ಪ್ರಕಾರ ಪೂರ್ಣ ದಿಗಂಬರಳಾಗಿಯೇ ಬರುತ್ತಾಳೆ. ತರಂಗಿಣಿ ಕಾದಂಬರಿಯಲ್ಲಿ ಅಕ್ಕ ಮೊದಲೇ ಸೀರೆ ಉಟ್ಟಿದ್ದರೂ ಕೆರೆಯ ದಂಡೆಯಲ್ಲಿ ಕಿನ್ನರಯ್ಯನ ಜೊತೆಗೆ ಮಾತಿಗಿಳಿದಾಗ ಒಣಗಲು ಹಾಕಿದ ಸೀರೆಯನ್ನು ಹೋರಿಯೊಂದು ತಿಂದುಹಾಕಿರುತ್ತದೆ. ಇದು ಲೇಖಕರ ದ್ವಂದ್ವ ಸ್ಥಿತಿಯನ್ನು ತಿಳಿಸುತ್ತದೆ.

ಗಿರಿಯ ನವಿಲು ಕಾದಂಬರಿಯಲ್ಲಿ ಅಕ್ಕ ಮಹಾಮನೆಯನ್ನು ಪ್ರವೇಶಿಸಿದೊಡನೆ ಗಂಗಾಬಿಕೆ -ನೀಲಾಂಬಿಕೆ ಆರತಿ ಬೆಳಗಿ ಮನೆಗೆ ಕರೆದೊಯ್ದು ಎಣ್ಣೆ-ಬೆಣ್ಣೆಯಿಂದ ಮೈ ತಿಕ್ಕಿ ಸ್ನಾನ ಮಾಡಿಸಿ ಉಪಚರಿಸುತ್ತಾರೆ. ಶರಣೆಯರ ಪರಿಚಯವೂ ಅಲ್ಲಿಯೇ ಆಗುತ್ತದೆ. ಇದಾದ ನಂತರ ಅನುಭವ ಮಂಟಪಕ್ಕೆ ಕರೆದೊಯ್ಯುತ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ಇದೇ ಸನ್ನಿವೇಶವನ್ನು ಇನ್ನುಳಿದೆರಡು ಕಾದಂಬರಿಗಳಲ್ಲಿ ಅಲ್ಲಮ ಪ್ರಭುವಿನ ಪರೀಕ್ಷೆಯ ನಂತರ ಸನ್ನಿವೇಶವನ್ನಾಗಿ ಚಿತ್ರಿಸಲಾಗಿದೆ. ಅನುಭವ ಮಂಟಪ ಪ್ರವೇಶಿಸಿದ ಅಕ್ಕ ಬಸವಣ್ಣನಿಗೆ ನಮಸ್ಕರಿಸುವುದು, ಬಸವಣ್ಣ ಎಲ್ಲ ಶರಣರನ್ನು ಅಕ್ಕನಿಗೆ ಪರಿಚಯಿಸುವುದು ಗಿರಿಯ ನವಿಲು ಮತ್ತು ತರಂಗಿಣಿ ಕಾದಂಬರಿಯಲ್ಲಿ ಒಂದೇ ರೀತಿ ಇದೆ. ಆದರೆ ಕದಳಿ ಕರ್ಪೂರದಲ್ಲಿ ಈ ಸನ್ನಿವೇಶವಿಲ್ಲ.

ಅಕ್ಕನ ವ್ಯಕ್ತಿತ್ವ ಅಲ್ಲಮನಿಗೂ ತಿಳಿದಿದ್ದರೂ ಅದನ್ನು ಸಾಧನೆಯ ಹಂತದಲ್ಲಿರುವ ಎಲ್ಲ ಶರಣರಿಗೆ ಅವಳ ಉತ್ತರಗಳಿಂದಲೇ ತಿಳಿಸಿಕೊಡುವ ವಿಚಾರದಿಂದ ಪ್ರಶ್ನೆಗಳನ್ನು ಕೇಳುವ ಅದಕ್ಕೆ ಅಕ್ಕ ಉತ್ತರಿಸುವ ಸನ್ನಿವೇಶ ಮೂರು ಕಾದಂಬರಿಗಳಲ್ಲಿ ಒಂದೇ ರೀತಿ ಇವೆ. ತರಂಗಿಣಿ ಕಾದಂಬರಿಯ ಪ್ರಕಾರ ಕಲ್ಯಾಣಕ್ಕೆ ಬಂದ ಅಕ್ಕ ಪ್ರಭುದೇವರ ಸನ್ನಿಧಿಯಲ್ಲಿ ಬಸವಣ್ಣನವರಿಂದ ಜಂಗಮ ದೀಕ್ಷೆಯನ್ನು ಪಡೆದು ಕಾವಿ ವಸ್ತ್ರವನ್ನು ಧರಿಸುತ್ತಾಳೆ. ಗಿರಿಯ ನವಿಲು ಕಾದಂಬರಿಯಲ್ಲಿ ಇಲ್ಲಿಯವರಿಗೆ ಶೈವಳಾಗಿದ್ದ ಅವಳಿಗೆ ಬಸವಣ್ಣ ವೀರಶೈವ ದೀಕ್ಷೆ ಕೊಟ್ಟರು ಎಂಬ ವಿಷಯವನ್ನು ಹೇಳುತ್ತಾರೆ. ಕಾವಿ ವಸ್ತ್ರಧಾರಿಣಿಯಾದಳು ಎಂಬ ವಿಚಾರವನ್ನು ಅವರು ಮಾತನಾಡುವುದೇ ಇಲ್ಲ. ಇವರು

ಇನ್ನುಳಿದ ಲೇಖಕರ ರೀತಿಯಲ್ಲಿ ದ್ವಂದ್ವಕ್ಕೆ ಸಿಲುಕಿಲ್ಲ. ಅವರ ನಿಲುವಿಗೆ ಬದ್ಧರಾಗಿಯೇ ಇದ್ದಾರೆ. ಕದಳಿಯ ಕರ್ಪೂರ ಕಾದಂಬರಿಯಲ್ಲಿ ದೀಕ್ಷೆ ಕೊಟ್ಟ ಪ್ರಸ್ತಾಪ ಇದ್ದರೂ ಕಲ್ಯಾಣದಿಂದ ಕದಳಿಗೆ ಹೋಗುತ್ತಿರುವಾಗ ತೆಳುಕಾವಿ ಸೀರೆಯನ್ನು ಉಟ್ಟಿರುವುದಾಗಿ ಕಾದಂಬರಿಕಾರರು ಹೇಳುತ್ತಾರೆ.

ಮಹಾಮನೆಯಲ್ಲಿ ಅಕ್ಕನ ಸಾಧನೆ ಸಿದ್ಧಿಗಳ ನಿರೂಪಣೆ ಮೂರು ಕಾದಂಬರಿಗಳಲ್ಲಿಯೂ ಮೂಡಿ ಬಂದಿದೆ. ಆದರೆ ಗಿರಿಯ ನವಿಲುವಿನಲ್ಲಿ ಇದು ವಿಸ್ತಾರವಾಗಿ ಮೂಡಿ ಬಂದಿಲ್ಲ. ಅಕ್ಕ ಕಲ್ಯಾಣದಲ್ಲಿ ಒಂದು ವರ್ಷ ಇದ್ದಳೆಂದು ಗಿರಿಯ ನವಿಲು ಕಾದಂಬರಿ ತಿಳಿಸಿದರೆ. ಐದು ವರ್ಷಗಳ ಕಾಲ ಇದ್ದಳೆಂದು ತರಂಗಿಣಿ ಕಾದಂಬರಿಯಲ್ಲಿ ನಿರೂಪಿತವಾಗಿದೆ ಆದರೆ ಕದಳಿಯ ಕರ್ಪೂರ ಕಾದಂಬರಿಯಲ್ಲಿ ಇದರ ಪ್ರಸ್ತಾಪ ಇಲ್ಲ. ಈ ವಿಷಯವನ್ನು ಗಮನಿಸಿದಾಗ ಆಯಾಯಾ ಲೇಖಕರ ಕಾಲ್ಪನಿಕ ಸೃಷ್ಟಿಯಾಗಿದೇ ಹೊರತು ಇದಕ್ಕೆ ಇತಿಹಾಸದಲ್ಲಿ ದಾಖಲೆಗಳಿಲ್ಲ ಎಂಬುದು ಸತ್ಯ.

ಲಿಂಗಾಂಗದ ಸಾಮರಸ್ಯವನ್ನು ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿ ಚಿತ್ರಿಸಿವೆ. ತರಂಗಿಣಿ ಕಾದಂಬರಿಯಲ್ಲಿ ಒಂದು ಹುಣ್ಣಿಮೆಯ ದಿನ ಇರುಳಿನ ಕಡೆಯ ಜಾವ ಮಹಡಿಯನ್ನೇರಿ ಅಲ್ಲಿಯೇ ಇಷ್ಟಲಿಂಗವನ್ನು ಅಂಗೈಯಲ್ಲಿರಿಸಿಕೊಂಡು ಪೂಜೆಗೆ ತೊಡಗುತ್ತಾಳೆಂದು ಚಿತ್ರಿಸುತ್ತದೆ. ಕದಳಿಯ ಕರ್ಪೂರ ಕಾದಂಬರಿಯಲ್ಲಿ ಪೂಜಾ ಕೋಣೆಯಲ್ಲಿ ಇಷ್ಟಲಿಂಗ ಪೂಜೆಯಲ್ಲಿ ತೊಡಗುತ್ತಾಳೆಂದು ಚಿತ್ರಿಸಿದ್ದಾರೆ. ಈ ಸನ್ನಿವೇಶವನ್ನು ಕಂಡ ಬಸವ ಅಲ್ಲಮರು ಅವಳನ್ನು ಬಹಿರ್ ಪ್ರಜ್ಞೆಗೆ ತರುವ ಸನ್ನಿವೇಶ ನಿರ್ಮಾಣ ಎರಡೂ ಕಾದಂಬರಿಯಲ್ಲಿಯೂ ಇದೆ. ತರಂಗಿಣಿ ಕಾದಂಬರಿಯಲ್ಲಿ ಲಿಂಗಾಂಗದ ಸಾಮರಸ್ಯ ಹೊಂದಿದ ಮೇಲೆ 'ದಾರ್ಶನಿಕ ದೇವಗಂಗೆ' ಮತ್ತು 'ದ್ವೇಷದ ಜ್ವಾಲೆ ಮತ್ತು ಪ್ರೇಮದ ಜಲ' ಎಂಬ ಎರಡು ಸನ್ನಿವೇಶಗಳಿವೆ. ಇದು ಉಳಿದೆರಡು ಕಾದಂಬರಿಯಲ್ಲಿ ಇಲ್ಲ.

ಕದಳಿಯ ಕರ್ಪೂರ ಕಾದಂಬರಿಯಲ್ಲಿ ಅಲ್ಲಮ ಅಕ್ಕನನ್ನು ಕಲ್ಯಾಣದಲ್ಲಿ ಉಳಿಸಿಕೊಳ್ಳಲು ಒತ್ತಾಯ ಮಾಡುವುದಿಲ್ಲ. ಉಳಿದೆರಡು ಕಾದಂಬರಿಯಲ್ಲಿ ಒತ್ತಾಯ ಪಡಿಸುತ್ತಾನೆ. ಬಸವಣ್ಣ ಮತ್ತು ಇತರ ಶರಣರೆಲ್ಲರೂ ಅಕ್ಕನನ್ನು ಕಲ್ಯಾಣದಲ್ಲಿ ಉಳಿಸಿ ಕೊಳ್ಳುವ ಚಿತ್ರಣ, ಅಲ್ಲಮ ಶ್ರೀ ಶೈಲಕ್ಕೆ ಮಾರ್ಗದರ್ಶನ ಮಾಡುವ ವಿಷಯಗಳು ಮೂರು ಕಾದಂಬರಿಯಲ್ಲಿಯೂ ಸಮಾನವಾಗಿ ಮೂಡಿಬಂದಿದೆ.

ತರಂಗಿಣಿ ಕಾದಂಬರಿಯಲ್ಲಿ ಅಕ್ಕ ಕಲ್ಯಾಣದಿಂದ ಹೊರಡುವಾಗ ವಿಶೇಷ ಆಸನವನ್ನಿಟ್ಟು ಅದರ ಮೇಲೆ ಕುಳ್ಳಿರಿಸಿ ಶರಣರೆಲ್ಲ ಪುಷ್ಪ ವೃಷ್ಟಿಗೈದರೆಂಬ ಸನ್ನಿವೇಶ ಬರುತ್ತದೆ, ಇದು ಇನ್ನೆರಡು ಕಾದಂಬರಿಯಲ್ಲಿ ಬರುವುದಿಲ್ಲ. ಈ ಕಾದಂಬರಿಗಳಲ್ಲಿ ಅಕ್ಕ ಹೊರಡಲನುವಾದಾಗ ಮಡಿವಾಳ ಮಾಚಿದೇವ ನಡೆಮಡಿ ಹಾಸುತ್ತಾನೆ. ಹರಳಯ್ಯ ಒಂದು ಜೊತೆ ಚಪ್ಪಲಿ ಕೊಡುವ ಸನ್ನಿವೇಶಗಳು ಈ ಎರಡು ಕಾದಂಬರಿಗಳಲ್ಲಿ ಬರುತ್ತದೆ. ಆದರೆ ತರಂಗಿಣಿ ಕಾದಂಬರಿಯಲ್ಲಿ ರೆಮವ್ವೆ ತಾನು ನೂತನೂಲಿನ ಸೀರೆಯನ್ನು ಮತ್ತು ಕುಂಬಾರ ಅಂಬಯ್ಯ ತತ್ರಾಣಿ ಕೊಡುವ ಸನ್ನಿವೇಶ ಇದರಲ್ಲಿ ಮಾತ್ರ ಕಂಡುಬರುತ್ತದೆ. ಕದಳಿಯ ಕರ್ಪೂರ ಮತ್ತು ಗಿರಿಯನವಿಲು ಕಾದಂಬರಿಯಲ್ಲಿ ಅಕ್ಕ ಶ್ರೀಶೈಲದತ್ತ ಏಕಾಂಗಿಯಾಗಿ ಸಾಗುತ್ತಾಳೆ. ಆದರೆ ತರಂಗಿಣಿಯಲ್ಲಿ ನೀಲಾಂಬಿಕೆಯ ಒತ್ತಾಯದ ಮೇರೆಗೆ ಅಕ್ಕ ಶ್ರೀಶೈಲದವರೆಗೆ ಮಾತ್ರ ನಾಲ್ಕು ಜನ ಜಂಗಮರನ್ನು ತನ್ನ ಜೊತೆ ಕರೆದುಕೊಂಡು ಹೋಗಲು ಒಪ್ಪುತ್ತಾಳೆ. ಇದು ಲೇಖಕಿಯ ದ್ವಂದ್ವ ಮುಖತೆಯನ್ನು ತಿಳಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಅಕ್ಕ ಕಲ್ಯಾಣದ ಶರಣ ಪರಿಸರದಲ್ಲಿ ಇದ್ದಳೆಂಬುದು ಸಂದೇಹವಿಲ್ಲ. ಅಕ್ಕನಿಗೆ ಅಪಾರ ಗೌರವ ಸಂದಿತ್ತು. ಜೊತೆಗೆ ಅಕ್ಕನಿಗೆ ಕಲ್ಯಾಣದ ಬಗ್ಗೆ ಅಭಿಮಾನವೂ, ಕಲ್ಯಾಣಕ್ಕೆ ತಾನು ಬಂದಿದುಕ್ಕಾಗಿ ಸಂತೃಪ್ತಿ ಇತ್ತು ಎಂಬುದು ಅವಳ ವಚನಗಳಲ್ಲಿಯೇ ಮನದಟ್ಟಾಗುತ್ತದೆ.

## ಕಲ್ಯಾಣದಿಂದ ಶ್ರೀ ಶೈಲಕ್ಕೆ

ಅಕ್ಕನ ಜೀವನ ಚಿತ್ರಣದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಆದರೆ ಆಕೆ ತನ್ನ ಕೊನೆಯ ದಿನಗಳನ್ನು ಶ್ರೀಶೈಲದಲ್ಲಿ ಕಳೆದಳು ಎಂಬುದು ಖಚಿತವಾದಂತಹ ವಿಷಯ ವಾಸ್ತವವಾಗಿದೆ. ಆ ದಿನಗಳಲ್ಲಿ ಉಂಟಾದ ಗಲಭೆಯಿಂದ ಕಲ್ಯಾಣದಲ್ಲಿನ ಶರಣರು ಆ ಊರನ್ನು ಬಿಟ್ಟು ಹೋಗಿರಬೇಕು. ಆಗ ಅಕ್ಕನು ಆ ಸಂದರ್ಭದಲ್ಲಿಯೇ ಶ್ರೀಶೈಲದತ್ತ ಸಾಗಿರಬೇಕೆಂಬುದು ವಿದ್ವಾಂಸರುಗಳ ಅಭಿಪ್ರಾಯ. ಈ ಅಂಶವನ್ನು ಆಧಾರವಾಗಿಟ್ಟುಕೊಂಡು ಕಾದಂಬರಿಕಾರರು ತಮ್ಮ ಕೃತಿಯಲ್ಲಿ ಕಲಾತ್ಮಕ ರಚನೆಯಲ್ಲಿ ತೊಡಗಿದ್ದಾರೆ.

ತರಂಗಿಣಿ ಕಾದಂಬರಿಯ ಅಕ್ಕ ಶ್ರೀಶೈಲಕ್ಕೆ ಹೋಗುವಾಗ ಸಮಾಜ ಸುಧಾರಕರಂತೆ, ಆಡಂಬರವಾದಿಗಳನ್ನು, ಮೂಢ'ನಂಬಿಕೆಯ ಅಜ್ಞರ'ನ್ನು ಖಂಡಿಸುತ್ತಾ ಬಸವ ತತ್ವಗಳನ್ನು ಪ್ರಸಾರ ಮಾಡುತ್ತಾ ಸಾಗುತ್ತಾಳೆ. ಇಂತಹ ವಿವರಗಳು ಉಳಿದೆರಡು ಕಾದಂಬರಿಯಲ್ಲಿ ಇಲ್ಲ. ಅಕ್ಕ ಶ್ರೀಶೈಲ ಪ್ರವೇಶಿಸಿ ಚೆನ್ನಮಲ್ಲಿಕಾರ್ಜುನನ ದರ್ಶನ ಮಾಡಿದುದರ ವಿವರಣೆ,

ಹಲವರನ್ನು ಸಂದರ್ಶಿಸಿದ ವಿಷಯ ಸ್ವಲ ಹೆಚ್ಚು ಕಡಿಮೆ ತರಂಗಿಣಿ ಮತ್ತು ಕದಳಿಯ ಕರ್ಪೂರ ಕಾದಂಬರಿಗಳಲ್ಲಿ ಒಂದೇ ರೀತಿ ಇದೆ. ಗಿರಿಯ ನವಿಲು ಕಾದಂಬರಿಯಲ್ಲಿ ಬರುವುದಿಲ್ಲ.

ಮುಂದೆ ಅಕ್ಕ ಪ್ರಕೃತಿಯ ರಮ್ಯ ತಾಣಗಳ ಸವಿಯನ್ನು ಸವಿಯುತ್ತಾ ಕದಳಿ ಬನದತ್ತ ಸಾಗುತ್ತಾಳೆ. ಈ ಸಂದರ್ಭದಲ್ಲಿ ಕದಳಿ ಬನದಲ್ಲಿ ಧ್ಯಾನಾಸಕ್ತಳಾದ ಅಕ್ಕನ ಬಳಿಗೆ ಹುಲಿಯೊಂದು ಬರುತ್ತದೆ. ಅದು ಅಕ್ಕನನ್ನು ನೋಡಿ ಹಾಗೆಯೇ ಹಿಂದಿರುಗಿ ಹೋಗುತ್ತದೆಂಬ ಚಿತ್ರಣ ಹೆಚ್ಚು ಕಡಿಮೆ ಕದಳಿ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಬರುತ್ತದೆ. ಈ ಘಟನೆ ವಾಸ್ತವಕ್ಕೆ ದೂರಾಗಿದೆ. ತಾರ್ಕಿಕ ದೃಷ್ಟಿಯಿಂದ ಕ್ರೂರ ಮೃಗಗಳು ಪುಣ್ಯವಂತರ ದೃಷ್ಟಿಯಿಂದ ದೃಷ್ಟಿ ಇಟ್ಟು ನೋಡಿದೊಡನೆಯೇ ತಮ್ಮ ಮೂಲ ಸ್ವಭಾವವನ್ನು ಮರೆಯಬಹುದಾದ ವ್ಯಕ್ತಿತ್ವವನ್ನು ಅಕ್ಕ ಪಡೆದಿದ್ದಳು ಎಂದು ವಿಮರ್ಶಕರು ವಾದ ಮಾಡುತ್ತಾರೆ. ಆದರೆ ಇದು ಒಂದು ಪವಾಡದ ರೂಪದಲ್ಲಿ ಸಹೃದಯರನ್ನು ಸಹಜತೆಯಿಂದ ದೂರಮಾಡುತ್ತದೆ.

ಕಾದಂಬರಿಯ ಅಂತಿಮ ಘಟ್ಟದಲ್ಲಿ ಕೌಶಿಕನ ಪಾತ್ರ ಮರುಕಳಿಸುತ್ತದೆ. ಗಿರಿಯನವಿಲು ಕಾದಂಬರಿಯ ಪ್ರಕಾರ ಅಕ್ಕ ಶ್ರೀಶೈಲದಲ್ಲಿ ಶಿವಯೋಗ ಧ್ಯಾನದಲ್ಲಿ ತನ್ಮಯಳಾದಾಗ ತರಂಗಿಣಿ ಮತ್ತು ಕದಳಿಯ ಕರ್ಪೂರ ಕಾದಂಬರಿಗಳ ಪ್ರಕಾರ ಕದಳಿಯ ವನದ ಮಾರ್ಗ ಮಧ್ಯದ ಗವಿಯ ಹತ್ತಿರ ಧ್ಯಾನಾಸಕ್ತಳಾದಾಗ ಕೌಶಿಕನ ಆಗಮನವಾಗುತ್ತದೆ. ಈ ಸನ್ನಿವೇಶದಲ್ಲಿ ಕಟ್ಟೀಮನಿಯವರು ಹರಿಹರನಿಗಿಂತ ಭಿನ್ನವಾದುದೇನು ಹೇಳುವುದಿಲ್ಲ. ಕಾದಂಬರಿಯ ಉದ್ದಕ್ಕೂ ಕೌಶಿಕನ ವ್ಯಕ್ತಿತ್ವದಲ್ಲಿ ಯಾವ ಬದಲಾವಣೆ ಬೆಳವಣಿಗೆ ಕಾಣಿಸುವುದಿಲ್ಲ. ಮಹೋನ್ನತ ಶಿಖರಕ್ಕೇರಿ ನಿಂತ ಅಕ್ಕನನ್ನು ತನ್ನ ಅರ್ಧಾಂಗಿನಿಯೇ ಎಂದು ಭಾವಿಸುತ್ತಾನೆ. ಆದರೆ ಉಳಿದೆರಡು ಕಾದಂಬರಿಗಳು ಈ ಸನ್ನಿವೇಶಕ್ಕೆ ಹೊಸ ತಿರುವನ್ನು ತಂದು ಕೊಟ್ಟಿದೆ. ಇವುಗಳ ಪ್ರಕಾರ ಕೌಶಿಕನ ಮೂಲ ಸ್ವಭಾವ ಬದಲಾಗುತ್ತದೆ. ಆತ ಕದಳಿಯಲ್ಲಿ ಅಕ್ಕನನ್ನು ಸಂಧಿಸಿ ಆಕೆಯ ಪಾದಕ್ಕೆರಗುತ್ತಾನೆ. ಅವಳನ್ನು ತಾಯಿ ಎಂದು ಸಂಬೋಧಿಸುತ್ತಾನೆ. ತಾಯಿಯೆಂದು ಭಾವಿಸುವ ಪರಿ ಪ್ರಾಚೀನ ಯಾವ ಕಾವ್ಯಗಳಲ್ಲಿಯೂ ಕಂಡುಬರುವುದಿಲ್ಲ. ಇದು ತಿಪ್ಪೇರುದ್ರಸ್ವಾಮಿಯವರ ಸ್ವಕಲ್ಪಿತವಾಗಿದ್ದರೂ, ಅದು ಆ ಪಾತ್ರದ ಬೆಳವಣಿಗೆ ಮತ್ತು ಸಾರ್ಥಕತೆಯನ್ನು ತೋರಿಸುತ್ತದೆ. ಬಹುಶಃ ತರಂಗಿಣಿ ಕಾದಂಬರಿಗೂ ಇದೇ

ಮೂಲವಾಗಿರಬಹುದು. ಇತಿಹಾಸದಲ್ಲಿಯೂ ಕೌಶಿಕನ ಈ ಬದಲಾವಣೆಯ ಬಗ್ಗೆ ಯಾವುದೇ ಮಾಹಿತಿ ಇಲ್ಲ.

## ಕದಳಿಯಲ್ಲಿ ಐಕ್ಯ

ಕಾದಂಬರಿಗಳ ಅಂತ್ಯ ಅಕ್ಕನ ಐಕ್ಯದೊಂದಿಗೆ ಮುಕ್ತಾಯವಾಗುತ್ತದೆ. ಗಿರಿಯ ನವಿಲು ಕಾದಂಬರಿಯ ಪ್ರಕಾರ ಅಕ್ಕನಿಗೆ ಸನ್ಯಾಸಿನಿಯರು ಕೌಶಿಕನನ್ನು ಪುನಃ ಸ್ವೀಕರಿಸಿ ಪುನಃ ಉಡುತಡಿಗೆ ಹೋಗೆಂದು ಉಪದೇಶಿಸುತ್ತಾರೆ. ಈ ಉಪದೇಶ ಅವಳಿಗೆ ಮಾನಸಿಕ ಹಿಂಸೆಯಾದಾಗ ಒಂದಿರುಳು ಅವರಿಗೆ ತಿಳಿಯದಂತೆಯೇ ಏಕಾಂಗಿನಿಯಾಗಿ ಕದಳಿಯತ್ತ ಸಾಗುತ್ತಾಳೆ. ಕದಳಿ ವನದ ಪ್ರಶಸ್ತವಾದ ಸ್ಥಳದಲ್ಲಿ ಅಕ್ಕ ಕೆಲವು ದಿನ ಯೋಗ ಸಾಧನೆಯಲ್ಲಿ ತೊಡಗಿ, ನಂತರ ಆಹಾರ ನೀರನ್ನು ತ್ಯಜಿಸಿ ಹಲವಾರು ಧ್ಯಾನದಲ್ಲಿ ನಿರತಳಾದಳೆಂದು ಕಟ್ಟೀಮನಿಯವರು ಚಿತ್ರಿಸುತ್ತಾರೆ.

ಕದಳಿ ಕರ್ಪೂರ ಕಾದಂಬರಿಯಲ್ಲಿ ಕೌಶಿಕ ಮತ್ತು ರಸವಂತಿಯರು ಅಕ್ಕನ ಜೊತೆಯಲ್ಲಿ ಕದಳಿ ವನವನ್ನು ಅಲ್ಲಿಯ ಗುಹೆಯನ್ನು ಸಂದರ್ಶಿಸುತ್ತಾರೆ. ಒಂದು ರಾತ್ರಿ ಚುಂಚರು ಕೌಶಿಕ ಮತ್ತು ರಸವಂತಿಯರಿಗೆ ತಂಗಲು ಅವಕಾಶ ಮಾಡಿಕೊಟ್ಟು, ಆನಂತರ ಎಲ್ಲರಿಗೂ ಹಿಂದಿರುಗುವಂತೆ ಸೂಚಿಸುತ್ತಾಳೆ. ಕೌಶಿಕ ಅಕ್ಕನಲ್ಲಿ ತನಗೆ ಜನ್ಮಕೊಟ್ಟ ತಾಯಿಯನ್ನು ಕಂಡುಕೊಳ್ಳುತ್ತಾನೆ. ಕೌಶಿಕ ಮತ್ತು ರಸವಂತಿಯರು ಶ್ರೀಶೈಲವನ್ನೇ ತಮ್ಮ ಸಾಧನರಂಗವಾಗಿ ಮಾಡಿಕೊಂಡು ಅಕ್ಕನ ವೈರಾಗ್ಯವನ್ನು ಯಾತ್ರಿಕರಿಗೆ ಸಾರುವಲ್ಲಿಯೇ ತಮ್ಮ ಜೀವನದ ಸಾರ್ಥಕ್ಯ ಕಂಡುಕೊಳ್ಳುವುದಾಗಿ ಬೆಟ್ಟವನ್ನಿಳಿಯುತ್ತಾರೆ. ಆಗ ಕದಳಿ ಗುಹೆಯ ಕಲ್ಲ ಮೇಲೆ ನಿಂತ ಅಕ್ಕನ ವಿಗ್ರಹ ಮರೆಯಾಗಿ ಅನುಪಮವಾದ ಬೆಳಕಿನ ಚಕ್ರವೊಂದು ತಿರುಗುತ್ತಿರುವಂತೆ ತೋರಿತು. ಆ ಚಕ್ರದಿಂದ ರುದ್ರಾಕ್ಷಿಯನ್ನು ಕಂಕಣ ಮಾಡಿಕೊಂಡ ಹಸ್ತವು ಅವರನ್ನು ಆಶೀರ್ವದಿಸಿದಂತೆ ಕಂಡಿತು ಎಂದು ಮುಕ್ತಾಯ ಮಾಡುತ್ತಾರೆ.

'ತರಂಗಿಣಿ' ಯ ಕಾದಂಬರಿಯಲ್ಲಿಯೂ ಕೂಡ ಹೆಚ್ಚುಕಡಿಮೆ ಕದಳಿಯ ಕರ್ಪೂರದ ಮುಕ್ತಾಯವನ್ನು ಹೋಲುತ್ತದೆ. ಇಲ್ಲಿ ಕೌಶಿಕ ಮತ್ತು ಶಿವಕಾಮಿನಿಯರು ಕದಳಿವನವನ್ನು ಪ್ರವೇಶಿಸುವುದಿಲ್ಲ. ಅವರಿಗೆ ತಿಳಿಯದಂತೆ ಅಕ್ಕ ವನವನ್ನು ಪ್ರವೇಶಿಸುತ್ತಾಳೆ. ಅಕ್ಕ ಚೆನ್ನಮಲ್ಲಿಕಾರ್ಜುನನಲ್ಲಿ ತನ್ನನ್ನು ಸ್ವೀಕರಿಸುವಂತೆ ಅಂತರಂಗದಲ್ಲಿ ನಿವೇದಿಸಿಕೊಳ್ಳುತ್ತಾಳೆ. ಆಗ ಅವಳ ಭ್ರೂಮಧ್ಯದಿಂದ ಬೆಳಕೊಂದು ಉದಯಿಸಿ ಇಷ್ಟಲಿಂಗದ ಸುತ್ತ ತಿರುಗುತ್ತ

ಲಯವಾಗುತ್ತದೆ. ಅದಕ್ಕೆ ಪ್ರತಿಸ್ಪರ್ಧಿಯಾಗಿ ಇಷ್ಟಲಿಂಗದಿಂದ ಒಂದು ಬೆಳಕು ಹುಟ್ಟಿ ವಿಶ್ವವನ್ನೆಲ್ಲ ವ್ಯಾಪಿಸುತ್ತ, ಅಕ್ಕನನ್ನು ಆವರಿಸುತ್ತದೆ. ಆಗ ಅಕ್ಕ ಇಲ್ಲವಾಗಿ ಬೆಳಕಿನ ಚಕ್ರವೊಂದು ತಿರುಗತೊಡಗುತ್ತದೆಂದು ಚಿತ್ರಿಸುತ್ತಾರೆ.

ಒಟ್ಟಿನಲ್ಲಿ ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳ ಮುಕ್ತಾಯ ವಾಸ್ತವದಿಂದ ಕೂಡಿಲ್ಲ. ಕವಿ ಕಲ್ಪನೆಯ ತಾರ್ಕಿಕ ರೀತಿಯ ಮುಕ್ತಾಯವಾಗುತ್ತದೆ. ಈ ಸಾಹಿತಿಗಳು ವೀರಶೈವ ಧರ್ಮದ ಗಾಢ ಪ್ರಭಾವಕ್ಕೆ ಒಳಗಾಗಿ ಈ ರೀತಿಯಾಗಿ ಚಿತ್ರಿಸಿದ್ದಾರೆ. ಗಿರಿಯನವಿಲು ಕಾದಂಬರಿಯಲ್ಲಿ ಈ ರೀತಿಯಾದ ಮುಕ್ತಾಯ ಇಲ್ಲ. ಲೇಖಕ ವಾಸ್ತವವಾದವನ್ನು ಒಪ್ಪಿಕೊಂಡು ಕಲ್ಪನೆಗಳಿಗೆ ಅವಕಾಶ ಮಾಡಿಕೊಟ್ಟಿಲ್ಲ. ಇದರ ಮುಕ್ತಾಯ ನೈಜವಾಗಿದ್ದು, ಸಹೃದಯರಿಗೆ ತೃಪ್ತಿಯನ್ನು ತಂದುಕೊಡುತ್ತದೆ.

ಹೀಗೆ ಮೂರು ಕಾದಂಬರಿಗಳಲ್ಲಿ ಬರುವ ಪಾತ್ರಗಳು ಕೆಲವು ಪಾತ್ರಗಳನ್ನು ಹೊರತು ಪಡಿಸಿದರೆ ಒಂದೇ ಆಗಿದೆ. ಕೆಲವು ಪಾತ್ರಗಳ ಹೆಸರುಗಳು ಮಾತ್ರ ಬದಲಾವಣೆಯಾಗಿದೆ. ಸನ್ನಿವೇಶಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿ ಇದ್ದರೂ ಅದು ಸಾಹಿತಿಗಳ ಕಲಾತ್ಮಕತೆಯಿಂದ ಬೇರೆ ಬೇರೆ ರೀತಿಯಲ್ಲಿ ಪಡಿಮೂಡಿದೆ. ಕೆಲವು ಐತಿಹಾಸಿಕ ಅಂಶಗಳಿಗೆ ಭಂಗ ಬಂದಿದೆ ಎನಿಸಿದರೂ ಒಂದು ಸಾಹಿತ್ಯ ಕೃತಿಯ ನಿರ್ಮಾಣದಲ್ಲಿ ಇದು ಸಹಜ ಎಂದೇ ಭಾವಿಸಬೇಕಾಗುತ್ತದೆ. ತೌಲನಿಕವಾಗಿ ಈ ಕಾದಂಬರಿಗಳ ಅಧ್ಯಯನ ಮಾಡಿದಾಗ ಕದಳಿಯ ಕರ್ಪೂರ ಮತ್ತು ತರಂಗಿಣಿ ಕಾದಂಬರಿಗಳಲ್ಲಿ ಹೆಚ್ಚು ಸಾಮ್ಯತೆ ಕಂಡುಬರುತ್ತದೆ. ಗಿರಿಯ ನವಿಲು ಕಾದಂಬರಿ ಈ ಎರಡು ಕೃತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಜೊತೆಗೆ ವಾಸ್ತವದ ಹತ್ತಿರಕ್ಕೆ ಕಾದಂಬರಿ ಕರೆದೊಯ್ಯುತ್ತದೆ. ತರಂಗಿಣಿ ಕಾದಂಬರಿ ಪ್ರಾಚೀನ ಕಾವ್ಯವನ್ನು ಆಧಾರವಾಗಿಟ್ಟುಕೊಂಡರೂ ಅದರ ಜೊತೆಗೆ ಕದಳಿ ಕರ್ಪೂರ ಕಾದಂಬರಿಯಿಂದ ಹೆಚ್ಚು ಪ್ರಭಾವಿತವಾಗಿದೆ.

~*~*~*~

## ಅಧ್ಯಾಯ : ೪

# ಉಪಸಂಹಾರ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಪ್ರಕಾರ ಜನಪ್ರಿಯವಾಗಿದೆ. ಇಂತಹ ಜನಪ್ರಿಯ ಪ್ರಕಾರದಲ್ಲಿ ಅಕ್ಕನ ಮಹಾ ಜೀವನ ಚಿತ್ರಣವನ್ನು ರಚನೆ ಮಾಡಿರುವುದು ನಿಜವಾಗಿಯೂ ಹೆಮ್ಮೆಯ ವಿಷಯವಾಗಿದೆ. ಅಕ್ಕನನ್ನು ವಸ್ತುವಾಗಿರಿಸಿಕೊಂಡು ಅನೇಕ ಕೃತಿಗಳು ಬಂದಿವೆ. ಆದರೆ ನನ್ನ ಅಧ್ಯಯನದ ಮಿತಿಯಿಂದ ಮೂರು ಕಾದಂಬರಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಯಿತು. ಏಕೆಂದರೆ ಕಾದಂಬರಿಯಲ್ಲಿ ಈ ವಸ್ತುವನ್ನು ಕುರಿತು ಪ್ರಕಟವಾಗಿರುವುದು ಮೂರೇ ಕಾದಂಬರಿಗಳು. ಐತಿಹಾಸಿಕ ಒಂದೇ ವಸ್ತುವನ್ನು ಒಳಗೊಂಡು ಭಿನ್ನ ಭಿನ್ನ ದಶಕಗಳಲ್ಲಿ ಬಂದಂತಹ ಕೃತಿಗಳಲ್ಲಿ ಆಗಿರುವ ಬೆಳವಣಿಗೆಯನ್ನು ಗುರುತಿಸುವ ತೋರಿಸುವ ಪ್ರಯತ್ನವನ್ನು ಮಾಡಿದ್ದೇನೆ. ಹಾಗೆಯೇ ಈ ಕಾದಂಬರಿಯಲ್ಲಿ ಅನೇಕ ಐತಿಹಾಸಿಕ – ಐತಿಹಾಸಿಕವಲ್ಲದ ಅಂಶಗಳ ಮೇಲೆ ಬೆಳಕು ಹರಿಸುವುದಾಗಿತ್ತು. ಇದರ ಜೊತೆಗೆ ಈ ಮೂರು ಕಾದಂಬರಿಗಳನ್ನು ತೌಲನಿಕವಾಗಿ ನೋಡುವ ಉದ್ದೇಶದಿಂದ ಈ ನಿಬಂಧನೆ ರಚನೆ ಮಾಡಿದೆ. ಈ ಮೇಲೆ ಹೇಳಿರುವ ಅಂಶಗಳ ಮೇಲೆ ಪೂರ್ಣಪ್ರಮಾಣದ ಅಲ್ಲದಿದ್ದರೂ ಕ್ವಚಿತ್ತಾಗಿಯಾದರೂ ನಿರೀಕ್ಷಿಸಿದ ಅಂಶಗಳ ಮೇಲೆ ಬೆಳಕು ಬೀರುವ ಕೆಲಸ ಈ ನಿಬಂಧ ಮಾಡಿದೆ.

ಅಕ್ಕನ ಮೂರು ಕಾದಂಬರಿಗಳಾದ ಬಸವರಾಜ ಕಟ್ಟೀಮನಿಯವರ ಗಿರಿಯ ನವಿಲು, ಡಾ. ತಿಪ್ಪೇರುದ್ರಸ್ವಾಮಿಯವರ ಕದಳಿಯ ಕರ್ಪೂರ, ಮಾತೆ ಮಹಾದೇವಿಯವರ ತರಂಗಿಣಿ ಕಾದಂಬರಿಗಳು ಈಗಾಗಲೇ ಹೇಳಿದಂತೆ ಒಂದೇ ಐತಿಹಾಸಿಕ ವಸ್ತುವನ್ನು ಒಳಗೊಂಡವೆ. ಈ ಮೂರು ಕಾದಂಬರಿಗಳಲ್ಲಿಯೂ ಹೆಚ್ಚು ಕಡಿಮೆ ಪಾತ್ರ ರಚನೆ ಸನ್ನಿವೇಶ, ನಿರ್ಮಾಣ ಇವೇ ಮೊದಲಾದ ಅಂಶಗಳು ಸಮಾನವಾಗಿ ಮೂಡಿಬಂದಿದೆ. ಈ ಕಥಾವಸ್ತುಗಳಿಗೆ ಮೂಲ ಆಕರಗಳು ಪ್ರಾಚೀನ ಕಾವ್ಯಗಳು ಮತ್ತು ಅಕ್ಕನ ವಚನಗಳಾಗಿವೆ. ಈ ಆಕರಗಳನ್ನು ಆಧಾರವಾಗಿಟ್ಟುಕೊಂಡು ಕಾದಂಬರಿಕಾರರು ತಮ್ಮ ಸೋಪಜ್ಞತೆಯನ್ನು ಮೆರೆದಿರುವುದನ್ನು ಕಾಣಬಹುದಾಗಿದೆ. ಬಸವರಾಜ ಕಟ್ಟೀಮನಿಯವರು ಹರಿಹರನ ಮಹಾದೇವಿಯಕ್ಕನರಗಳೆಯನ್ನು ಆಕರವಾಗಿಟ್ಟುಕೊಂಡು ಕಾದಂಬರಿಯನ್ನು ರಚಿಸಿದ್ದರೂ ತಮ್ಮ ನೈಜ ದೃಷ್ಟಿಯನ್ನು ಮತ್ತು ವಾಸ್ತವತೆಯ ಕಡೆಗೆ ಗಮನಕೊಟ್ಟಿರುವುದನ್ನು ಕಾಣಬಹುದಾಗಿದೆ. ತಿಪ್ಪೇರುದ್ರಸ್ವಾಮಿಯವರು ಮತ್ತು ಮಾತೆ ಮಹಾದೇವಿಯವರ

ಕಾಲವನ್ನು ದೃಷ್ಟಿಯಾಗಿಟ್ಟುಕೊಂಡು ನೋಡಿದಾಗ ಅವರು ಸಮಕಾಲೀನ ಅಂಶಗಳ ಮೇಲೆ ನಿರ್ಲಕ್ಷ್ಯವನ್ನು ತೋರಿದಂತೆ ಕಾಣುತ್ತದೆ. ಈ ಎರಡು ಕಾದಂಬರಿಗಳು ಹನ್ನೆರಡನೆಯ ಶತಮಾನದ ಪರಿಸರವನ್ನು ಕಟ್ಟಿಕೊಡುವುದರಲ್ಲಿಯೂ ಹಿಂದೆ ಬಿದ್ದಿದೆ. ಈ ದೃಷ್ಟಿಯಲ್ಲಿ ನೋಡಿದಾಗ ಕಟ್ಟೀಮನಿಯವರು ಶರಣ ಪರಿಸರ, ಮತಗಳ ಮೇಲಾಟಗಳನ್ನು ವಾಸ್ತವಕ್ಕೆ ಹತ್ತಿರವಿರುವಂತೆ ಚಿತ್ರಿಸಿದ್ದಾರೆ.

ಮಾತೆ ಮಹಾದೇವಿಯ ಕಾದಂಬರಿಯು ತುಂಬಾ ದೀರ್ಘವಾದುದು. ಪ್ರತಿಯೊಂದು ವಿಷಯವನ್ನು ವಿವರವಾಗಿ ವರ್ಣಿಸಿದ್ದಾರೆ. ಆದರೆ ಇನ್ನುಳಿದ ಲೇಖಕರ ಕಾದಂಬರಿಯು ಹಿತಮಿತವಾದ ವಿವರಗಳೊಂದಿಗೆ ಮೂಡಿಬಂದಿದೆ. ಕಟ್ಟೀಮನಿಯವರು ಅಕ್ಕನ ಜನನ ಬಾಲ್ಯ ಯೌವ್ವನಕ್ಕೆ ಕೊಟ್ಟಂತಹ ವಿವರಗಳಿಗೆ ಹೋಲಿಸಿದರೆ ಅಕ್ಕನ ಐಕ್ಯ ಅಥವಾ ಅವಳ ಉತ್ತರಾರ್ಧ ಜೀವನಕ್ಕೆ ಅಂತಹ ವಿವರಣೆಗಳನ್ನು ಕೊಡುವುದಿಲ್ಲ. ವೇಗವಾಗಿ ಕಥೆಯನ್ನು ಮುಕ್ತಾಯಮಾಡುವ ಆತುರ ಕಂಡುಬಂದಿದೆ. ಈ ದೃಷ್ಟಿಯಲ್ಲಿ ನೋಡಿದಾಗ ತಿಪ್ಪೇರುದ್ರಸ್ವಾಮಿಯವರು ಇನ್ನುಳಿದ ಲೇಖಕರಿಗಿಂತ ಸಮತ್ವವನ್ನು ಎಲ್ಲ ವಿವರಣೆಗಳಲ್ಲಿಯೂ ಕಾಯ್ದುಕೊಂಡು ಬಂದಿದ್ದಾರೆ. ಹೀಗೆ ಇನ್ನು ಅನೇಕ ಅಂಶಗಳನ್ನು ಈ ನಿಬಂಧದಲ್ಲಿ ವ್ಯಕ್ತಪಡಿಸಲಾಗಿದೆ. ಈ ನಿಬಂಧವನ್ನು ಅಧ್ಯಯನ ದೃಷ್ಟಿಯಿಂದ ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿತ್ತು. ಪ್ರತಿಯೊಂದು ಅಧ್ಯಯನದಲ್ಲಿಯೂ ಅಕ್ಕನ ಕುರಿತ ಜೀವನ ಚರಿತ್ರೆಯ ವಿಷಯವನ್ನು ಬಿಡಿ ಬಿಡಿಯಾಗಿಯೇ ನಿರೂಪಿಸಲಾಗಿದೆ.

ಮೊದಲನೇ ಅಧ್ಯಾಯವು ಈ ನಿಬಂಧಕ್ಕೆ ವಸ್ತುವನ್ನು ಆಯ್ಕೆಮಾಡಿಕೊಂಡಿದ್ದರ ಉದ್ದೇಶವನ್ನು ತಿಳಿಸಲಾಗಿದೆ. ಇದಲ್ಲದೆ ಈ ನಿಬಂಧವು ಒಳಗೊಂಡಿರುವ ವಿಷಯ ಬಗ್ಗೆ ಒಂದು ಕಿರು ನೋಟವನ್ನು ಹೇಳಲಾಗಿದೆ. ಹಾಗೆಯೇ ವಿಷಯದ ವ್ಯಾಪ್ತಿಯನ್ನು ಕುರಿತು ವಿವರಿಸಲಾಗಿದೆ. ಇತಿಹಾಸದಲ್ಲಿ ಅಕ್ಕನ ಸ್ಥಾನದ ಪರಿಚಯ ಮತ್ತು ಶರಣರ ಪರಿಸರದಲ್ಲಿ ಅವಳಿಗೆ ಇದ್ದ ಮಾನ್ಯತೆಯ ಬಗ್ಗೆ ತಿಳಿಸಿಕೊಡಲಾಗಿದೆ.

ಎರಡನೇ ಅಧ್ಯಾಯವ 'ಕಾದಂಬರಿಕಾರರ ಪರಿಚಯ'. ಒಂದು ಕೃತಿ ಎಂದ ಮೇಲೆ ಅದರ ಕೃತಿಕಾರರು ಮುಖ್ಯರಾಗುತ್ತಾರೆ. ಏಕೆಂದರೆ ಈ ಕಾದಂಬರಿಕಾರರು ಆಯ್ಕೆ ಮಾಡಿಕೊಂಡಿರುವ ವಸ್ತು ಮಹಾನ್ ಚೇತನಳಾದ ಅಕ್ಕಮಹಾದೇವಿಯದು. ಇಂತಹ ಮೇರು ಶಿಖರವನ್ನು ಸಾಹಿತ್ಯಕೃತಿಯಲ್ಲಿ ಸೆರೆಯಿಡಿಯುವುದು ಅಷ್ಟು ಸುಲಭದ ವಿಷಯವಲ್ಲ. ಈ ಕಾರಣದಿಂದಾಗಿ ಕಾದಂಬರಿಕಾರರ ಪರಿಚಯವನ್ನು ವಿವರವಾಗಿ

ಪರಿಚಯಿಸಲಾಗಿದೆ. ಇವರ ಇತರ ಕೃತಿಗಳ ಬಗ್ಗೆ ಮಾಹಿತಿ, ಅವರ ಮನೋಧರ್ಮ ವ್ಯಕ್ತಿತ್ವಗಳನ್ನು ಪರಿಚಯಿಸಲಾಗಿದೆ. ಏಕೆಂದರೆ ಅವರ ಮನೋಧರ್ಮ, ವ್ಯಕ್ತಿತ್ವಗಳು ಈ ಕಾದಂಬರಿಯ ಮೇಲೆ ಆಗಿದೆ ಎಂಬುದನ್ನು ಚಿತ್ರಿಸಲು ಈ ಅಧ್ಯಾಯವನ್ನು ರಚಿಸಲಾಗಿತ್ತು.

ಮೂರನೆಯ ಅಧ್ಯಾಯ 'ಅಕ್ಕನ ಜೀವನ ಚರಿತ್ರೆ', ಅಕ್ಕ ತನ್ನ ವಿಷಯವನ್ನು ಎಲ್ಲಿಯೂ ಹೇಳಿಕೊಂಡಿಲ್ಲ. (ವಚನಗಳನ್ನು ಹೊರತುಪಡಿಸಿದರೆ) ಆದ ಕಾರಣದಿಂದ ಅಕ್ಕನ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಐತಿಹಾಸಿಕವಾಗಿ ಲಭ್ಯವಿಲ್ಲ. ನಮಗೆ ಉಳಿದಿರುವ ದಾರಿ ಎಂದರೆ ಅಕ್ಕನನ್ನು ವಸ್ತುವಾಗಿರಿಸಿಕೊಂಡು ರಚಿಸಿದ ಪ್ರಾಚೀನ ಕಾವ್ಯಗಳು. ಈ ಕಾವ್ಯಗಳನ್ನು ರಚಿಸಿದ ಕವಿಗಳು ಅಕ್ಕನ ಸಮಕಾಲೀನ ಮತ್ತು ಆನಂತರದ ಕಾಲಮಾನಕ್ಕೆ ಸೇರಿದವರು. ಈ ಕಾರಣದಿಂದ ಅಕ್ಕನ ಬದುಕನ್ನು ಯಾವ ರೀತಿಯಲ್ಲಿ ಚಿತ್ರಿಸಿದ್ದಾರೆಂಬುನ್ನು ತಿಳಿದುಕೊಳ್ಳಲಾಗಿದೆ. ಪ್ರಸ್ತುತ ನಿಬಂಧನೆಯಲ್ಲಿ ಬರುವ ಕಾದಂಬರಿಕಾರರು ಈ ಪ್ರಾಚೀನ ಕಾವ್ಯಗಳನ್ನು ಆಕರವಾಗಿಟ್ಟುಕೊಂಡು ಕಾವ್ಯವನ್ನು ರಚಿಸಿದ್ದಾರೆ. ಈ ದೃಷ್ಟಿಯಿಂದ ಯಾವ ಕೃತಿಯ ಯಾವ ಅಂಶಗಳನ್ನು ತೆಗೆದುಕೊಂಡಿದ್ದಾರೆಂಬುದನ್ನು ತಿಳಿಯುವ ಸಲುವಾಗಿ ಈ ಅಧ್ಯಾಯವನ್ನು ಬರೆಯಲಾಗಿತ್ತು. ಈ ಕೃತಿಗಳ ಸಂಕ್ಷಿಪ್ತ ವಿವರಣೆಯಿಂದ ಕಾದಂಬರಿಕಾರರು ತಮ್ಮ ಕಥಾವಸ್ತುವಿನಲ್ಲಿ ತಂದಿರುವ ವ್ಯತ್ಯಾಸ, ಮಾರ್ಪಾಡು, ಹೊಸ ಸನ್ನಿವೇಶಗಳ ನಿರ್ಮಾಣವನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ಒಂದು ಉದ್ದೇಶದಿಂದ ಈ ಅಧ್ಯಾಯವನ್ನು ಬರೆಯಲಾಗಿದೆ.

ನಾಲ್ಕನೇ ಅಧ್ಯಾಯ 'ವಚನಗಳಲ್ಲಿ ಅಕ್ಕ.' ಅಕ್ಕನ ನೈಜ ಜೀವನವನ್ನು ನಿರೂಪಿಸಲು ಇರುವ ಏಕೈಕ ಆಧಾರ ಎಂದರೆ ಆಕೆಯ ವಚನಗಳು. ಈ ವಚನಗಳ ಕೇಂದ್ರಭಾವ ವೈಯಕ್ತಿಕ ಅಂಶವಾಗಿದೆ. ಆದ ಕಾರಣ ವಚನಗಳಲ್ಲಿ ಮೂಡಿಬಂದಿರುವ ಅಕ್ಕನ ಜೀವನ ಚರಿತ್ರೆಯನ್ನು ಕಟ್ಟಿಕೊಡುವ ಕಿರುಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿತ್ತು. ಏಕೆಂದರೆ ಕಾದಂಬರಿಕಾರರು ಪ್ರಾಚೀನ ಕೃತಿಗಳನ್ನು ಮಾತ್ರ ಆಧಾರವಾಗಿಟ್ಟುಕೊಂಡು ಕೃತಿಯನ್ನು ರಚಿಸಿಲ್ಲ. ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ವಚನಗಳನ್ನು ಬಳಸಿಕೊಂಡಿದ್ದಾರೆ. ಈ ಕಾರಣದಿಂದ ಅಕ್ಕನ ವಚನಗಳನ್ನು ವಿಶ್ಲೇಷಿಸಿ ಅವಳ ಬದುಕಿನ ಚಿತ್ರಣ ನೀಡುವ ಉದ್ದೇಶದಿಂದ ಈ ಅಧ್ಯಾಯವನ್ನು ಬರೆಯಲಾಗಿದೆ.

ಐದನೆ ಅಧ್ಯಾಯ 'ಕಥಾವಸ್ತು.' ಮೂರು ಜನ ಕಾದಂಬರಿಕಾರರ ಕಥಾವಸ್ತು ಒಂದೇ. ಕಥೆಯ ವಸ್ತು ಒಂದೇ ಆದರೂ ಅದನ್ನು ನಿರೂಪಿಸಿರುವ ವಿಧಾನ ಬೇರೆ

ಬೇರೆಯಾಗಿದೆ. ಇವರು ಕಾದಂಬರಿಗಳಿಗೆ ಆಕರವಾಗಿಟ್ಟುಕೊಂಡಿರುವ ಕೃತಿಗಳೂ ಕೂಡ ಬೇರೆ ಬೇರೆಯಾಗಿದೆ. ವಿಭಿನ್ನ ಮನೋಧರ್ಮವುಳ್ಳ ಸಾಹಿತಿಗಳಾದ ಇವರು ಅವರ ದೃಷ್ಟಿಕೋನದಿಂದಲೇ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಕಾದಂಬರಿ ಕೃತಿಗಳನ್ನು ಪರಿಚಯಿಸುತ್ತ ಲೇಖಕರ ನಿಲುವು ಧೋರಣೆಗಳನ್ನು ವಿಮರ್ಶೆಮಾಡಲಾಗಿದೆ. ಜೊತೆಗೆ ಕಾದಂಬರಿಗಳಲ್ಲಿ ಅವರ ಮಿತಿಗಳನ್ನು ಕುರಿತು ಚರ್ಚಿಸಲಾಗಿದೆ. ಐತಿಹಾಸಿಕ ವ್ಯಕ್ತಿಯನ್ನು ಸಾಹಿತ್ಯ ಕೃತಿಯಲ್ಲಿ ತಂದಾಗ ಎದುರಾಗುವ ಸಮಸ್ಯೆಗಳನ್ನು ಬಿಡಿಸಲಾಗಿದೆ.

ಆರನೇ ಅಧ್ಯಾಯ 'ಕಾದಂಬರಿಯ ಅಭಿವ್ಯಕ್ತಿ.' ಇದರಲ್ಲಿ ಕಾದಂಬರಿಕಾರರು ಕಾದಂಬರಿ ನಿರೂಪಿಸಿರುವ ವಿಧಾನದ ಬಗ್ಗೆ ಹೇಳಲಾಗಿದೆ. ಕಾದಂಬರಿಕಾರರ ಸೃಜನ ಶೀಲತೆಯಲ್ಲಿ ಬಳಕೆಯಾಗಿರುವ ತಂತ್ರ, ಕಥಾವಸ್ತು, ಸನ್ನಿವೇಶ ನಿರ್ಮಾಣ, ಪಾತ್ರಸೃಷ್ಟಿ, ಭಾಷೆಯ ಬಳಕೆ, ಸಂಭಾಷಣೆ ಇವೇ ಮೊದಲಾದ ಐತಿಹಾಸಿಕ ಅಂಶಗಳ ಆಧಾರದ ಮೇಲೆ ~~ಈ ಅಧ್ಯಾಯವನ್ನು~~ ವಿಶ್ಲೇಷಿಸಲಾಗಿದೆ. ಈ ಅಂಶಗಳನ್ನು ಗಮನಿಸಿ ಚರ್ಚಿಸಿದಾಗ ಕೃತಿಗಳ ಮಾನದಂಡಕ್ಕೆ ಆಧಾರ ದೊರಕಿತ್ತು. ಈ ಅಂಶಗಳು ಕಥಾವಸ್ತುವಿಗೆ ಪೂರಕವಾಗಿ ಬಂದಿದೆಯೇ ಎಂಬುದು ತಿಳಿಯುತ್ತದೆ. ಇವುಗಳಿಂದ ಕಥೆಯ ಬಂಧಕ್ಕೆ ಏನಾದರು ಧಕ್ಕೆಯಾಗಿದೆಯೇ? ಅಥವಾ ಪೋಷಕವಾಗಿ ಮೂಡಿಬಂದಿದೆಯೇ? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಿದ್ದೇನೆ.

ಏಳನೆಯ ಅಧ್ಯಾಯ 'ಕಾದಂಬರಿಗಳ ತೌಲನಿಕ ನೋಟ.' ಈ ಅಧ್ಯಾಯದಲ್ಲಿ ಮೂರು ಕಾದಂಬರಿಗಳ ತೌಲನಿಕ ನೋಟವನ್ನು ನೋಡಬಹುದು. ಅಧ್ಯಯನ ದೃಷ್ಟಿಯಿಂದ ಮೊದಲಿಗೆ ಈ ಅಧ್ಯಾಯದಲ್ಲಿ ಉಪವಿಭಾಗವನ್ನು ರಚಿಸಿಕೊಳ್ಳಲಾಗಿದೆ. ಏಕೆಂದರೆ ಸಾಕಷ್ಟು ಕಾದಂಬರಿಗಳು ವಿಸ್ತಾರವಾಗಿರುವ ಕಾರಣ. ಅಕ್ಕನ ಹುಟ್ಟೂರು, ಬಾಲ್ಯ, ಯೌವ್ವನ, ವಿವಾಹ ವೈರಾಗ್ಯ, ಐಕ್ಯ ಇವೇ ಮುಂತಾದ ಅಂಶಗಳನ್ನು ಬಿಡಿಬಿಡಿಯಾಗಿ ಅಧ್ಯಯನ ಮಾಡಲಾಗಿತ್ತು. ಈ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಲೇಖಕರು ಅಕ್ಕನ ಜೀವನದ ಬಗ್ಗೆ ತಳೆದಿರುವ ಧೋರಣೆಗಳ ಸ್ಪಷ್ಟ ನೋಟವನ್ನು ಕಾಣಬಹುದು. ಈ ಕಾದಂಬರಿಕಾರರು ಅಕ್ಕನ ಜೀವನ ಚರಿತ್ರೆಯ ಬಗ್ಗೆ ಇರುವ ಅಸ್ಪಷ್ಟತೆಯನ್ನು ತೊಡೆದುಹಾಕಲು ಪ್ರಯತ್ನಿಸಿರುವಂತೆ ಕಂಡುಬರುತ್ತದೆ. ಇದನ್ನು ಎಷ್ಟರ ಮಟ್ಟಿಗೆ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ ಹಾಗೆಯೇ ಕಾದಂಬರಿಕಾರರು ನೈಜತೆಯನ್ನು ತರುವ ಸಂದರ್ಭದಲ್ಲಿ ಅವಾಸ್ತವಿಕ ಚಿತ್ರಣಗಳನ್ನು ಯಾಕೆ ತಂದಿದ್ದಾರೆ ಎಂಬುದನ್ನು ವಿಶ್ಲೇಷಣೆ ಮಾಡಲಾಗಿದೆ.

ಈ ಕಾದಂಬರಿಗಳಲ್ಲಿ ಯಾವುದೂ ಅಕ್ಕನ ನೈಜ ಬದುಕನ್ನು ಕಟ್ಟಿಕೊಡುತ್ತದೆ, ಯಾವುದೂ ಅಲ್ಲ. ಕಥೆಯ ಸಾಫಲ್ಯತೆ ಯಾವ ರೀತಿಯಾಗಿ ಮೂಡಿಬಂದಿದೆ. ಮೊದಲಾದ ಅನೇಕ ಅಂಶಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಿ ಉತ್ತರವನ್ನು ನೀಡಿದ್ದೇನೆ.

ಕೊನೆಯ ಅಧ್ಯಾಯ 'ಉಪಸಂಹಾರ'ವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ನಿಬಂಧ ಒಳಗೊಂಡಿರುವ ಸಂಕ್ಷಿಪ್ತ ಪರಿಚಯ ಮುಕ್ತಾವನ್ನು ಒಳಗೊಂಡಿದೆ. ಇವೆ ನಿಬಂಧದ ಸ್ವರೂಪ, ವಿವರಣೆಯನ್ನು ತಿಳಿಸುವ ಪಕ್ಷಿ ನೋಟವನ್ನು ಈ ಅಧ್ಯಾಯ ಒಳಗೊಳ್ಳುವಂತೆ ಬರೆದಿದ್ದೇನೆ.

ಈ ಮೂರು ಕಾದಂಬರಿಗಳ ವಸ್ತು ಐತಿಹಾಸಿಕ ವ್ಯಕ್ತಿಯಾಗಿದೆ. ಐತಿಹಾಸಿಕ ವ್ಯಕ್ತಿಗಳನ್ನು ಒಂದು ಕಲಾಕೃತಿಯಲ್ಲಿ ನಿರ್ಮಿಸಬೇಕಾದರೆ ಕಾದಂಬರಿಕಾರರಿಗೆ ಕೆಲವು ಮಿತಿಗಳಿರುತ್ತದೆ. ಈ ವ್ಯಕ್ತಿಗಳ ಬಗೆಗೆ ಜನರಲ್ಲಿ ಒಂದು ನಂಬಿಕೆ ಭಾವನೆಗಳು ಕೆಲಸ ಮಾಡುತ್ತಿರುತ್ತವೆ. ಈ ಮೌಲ್ಯಗಳಿಗೆ ಧಕ್ಕೆಯಾಗದ ಹಾಗೆ ಸಾಹಿತಿ ಕಾದಂಬರಿಯನ್ನು ರಚಿಸಬೇಕಾಗುತ್ತದೆ. ಇದರಲ್ಲಿ ಯಶಸ್ಸುಗೊಳಿಸುವುದು ಅಷ್ಟು ಸುಲಭದ ಮಾತಲ್ಲ. ಇದು ಕಾದಂಬರಿಕಾರಿನಿಗೆ ಸವಾಲೇ ಸರಿ. ಇಂತಹ ವಸ್ತುಗಳಲ್ಲಿ ಸಾಹಿತಿಯಾದವನಿಗೆ ಕಾಲ್ಪನಿಕತೆಗೆ ಹೆಚ್ಚು ಅವಕಾಶವಿರುವುದಿಲ್ಲ ಜೊತೆಗೆ ಐತಿಹಾಸಿಕ ಮಾಹಿತಿಗಳು ಹೆಚ್ಚು ಲಭ್ಯವಿರುವುದಿಲ್ಲ. ಈ ಎಲ್ಲ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಕಾದಂಬರಿಗಳನ್ನು ಮೌಲ್ಯಮಾಪನಕ್ಕೆ ಒಳಪಡಿಸಿದರೆ ಇವುಗಳು ಉತ್ತಮ ಕಾದಂಬರಿಯ ಸ್ಥಾನವನ್ನು ಅಲಂಕರಿಸುತ್ತವೆ.

ಕಟ್ಟೀಮನಿಯವರು ಅಕ್ಕನ ಜೀವನವನ್ನು ನೈಜ ದೃಷ್ಟಿಯಿಂದಲೇ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಕಾದಂಬರಿಯ ಒಳಗೆ ಇದರ ಅನೇಕ ಕುರುಹುಗಳು ದೊರೆಯುತ್ತವೆ. ಇಲ್ಲಿವರೆಗೆ ಅಕ್ಕನ ಜೀವನಕ್ಕೆ ಅಂಟಿಕೊಂಡಿದ್ದ ಮೆರಗನ್ನು ವೈರಾಗವನ್ನು ತಡೆದು ವಾಸ್ತವಿಕ ಅಂಶಗಳ ಮೇಲೆ ಬೆಳಕು ಬೀರಿದ್ದಾರೆ. ಅಂದಿನ ಸಮಾಜದ ಏರು ಪೇರುಗಳು, ಮತಗಳ ಮೇಲಾಟ ವಾಸ್ತವಕ್ಕೆ ಹತ್ತಿರವಾಗಿ ಮೂಡಿಬಂದಿದೆ.

ತಿಪ್ಪೇರುದ್ರಸ್ವಾಮಿಯವರು ಅಕ್ಕನನ್ನು ಇಡೀ ಜಗತ್ತಿನ ಮಹಿಳಾ ಸಾಧಕೀಯರಲ್ಲಿಯೇ ಅಗ್ರಗಣ್ಯಳು, ಅಪರೂಪ ವ್ಯಕ್ತಿಯಾಗಿ ಹೆಣ್ತನದ ಪರಿಪೂರ್ಣ ಸ್ವರೂಪವಾಗಿ ಚಿತ್ರಿಸಿದ್ದಾರೆ. ಅಕ್ಕ ಮಹಾಶಕ್ತಿಯಾಗಿ ಕಂಡುಬಂದಿದ್ದಾಳೆ. ಲೇಖಕರ ದೃಷ್ಟಿಯಿಂದ ಅಕ್ಕನ ಪಾತ್ರವಷ್ಟನ್ನೇ ಉಜ್ವಲಗೊಳಿಸಿಲ್ಲ. ಕೌಶಿಕನ ಪಾತ್ರವು ಅಕ್ಕನ

ಕಾಂತಿಯ ಬೆಳಕಿನಲ್ಲಿ ಮಿನುಗಿದೆ. ಈ ಪಾತ್ರಕ್ಕೆ ನ್ಯಾಯವನ್ನು ಒದಗಿಸಿದ್ದಾರೆ. ಇದು ಐತಿಹಾಸಿಕವಾಗಿ ಸತ್ಯವಲ್ಲದಿದ್ದರೂ ಒಂದು ಕಾದಂಬರಿಯ ಕಲಾತ್ಮಕತೆಯ ದೃಷ್ಟಿಯಿಂದ ಇದನ್ನು ಒಪ್ಪಿಕೊಳ್ಳಬಹುದಾಗಿದೆ. ಹೀಗೆ ಹೊಸ ದೃಷ್ಟಿಯಿಂದ ಕಾದಂಬರಿಯನ್ನು ನಿರ್ಮಿಸಿದ್ದಾರೆ.

ಮಾತೆ ಮಹಾದೇವಿಯವರು ತಿಪ್ಪೇರುದ್ರಸ್ವಾಮಿಯವರ ಕೃತಿಯನ್ನು ಆಕರವಾಗಿ ಬಳಸಿಕೊಂಡು ದೀರ್ಘವಾಗಿ ಈ ಕೃತಿಯನ್ನು ರಚಿಸಿದ್ದಾರೆ. ವಿವರಗಳು ಅತಿಯಾದರೂ ವಿಭಿನ್ನರೀತಿಯಲ್ಲಿ ಕಾದಂಬರಿಯನ್ನು ಬೆಳೆಸಿಕೊಂಡು ಹೋಗಿದ್ದಾರೆ. ಅಕ್ಕನ ವ್ಯಕ್ತಿತ್ವಕ್ಕೆ ನ್ಯಾಯ ಒದಗಿಸುವ ಪ್ರಯತ್ನ ಮಾಡಿದ್ದಾರೆ.

ಹೀಗೆ ಮೂರು ಕಾದಂಬರಿಗಳ ವಿಶ್ಲೇಷಣೆ ಮಾಡಿದಾಗ ಯಾವುದು ಶ್ರೇಷ್ಠ ಯಾವುದೂ ಶ್ರೇಷ್ಠವಲ್ಲ ಎನ್ನುವುದನ್ನು ನಿರ್ಧರಿಸುವುದಕ್ಕಿಂತ ಇದರ ವಿಷಯ ನಿರೂಪಣೆಯಲ್ಲಿನ ಸೋಪಜ್ಞತೆಯನ್ನು ಪರಿಗಣಿಸಬೇಕು.

~*~*~*~*~*~

# ~ಃ ಗ್ರಂಥ ಋಣ ಃ~


| | | | |
|---|---|---|---|
| 1. | ಗಿರಿಯ ನವಿಲು | : | ಬಸವರಾಜ ಕಟ್ಟೀಮನಿ<br>1956 ರಲ್ಲಿ ಪ್ರಕಾಶನ |
| 2. | ಕದಳಿಯ ಕರ್ಪೂರ | : | ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ<br>ಡಿ.ವಿ.ಕೆ ಮೂರ್ತಿ<br>ಕೃಪಮೂರ್ತಿಪುರಂ, ಮೈಸೂರು – 4<br>2002 ರಲ್ಲಿ ಪ್ರಕಟ |
| 3. | ತರಂಗಿಣಿ | : | ಮಾತೆ ಮಹಾದೇವಿ<br>ಸುಯಿಧಾನ ಸುಗಂಧಮಾಲೆ<br>ಜಗನ್ಮಾತಾ ಅಕ್ಕಮಹಾದೇವಿ ಆಶ್ರಮ<br>ಧಾರವಾಡ – 580 003 |
| 4. | ಮಹಾದೇವಿ | : | ಸಿದ್ದಯ್ಯ ಪುರಾಣಿಕ<br>ಶ್ರೀ ಸಿ.ಎಸ್ ಕಣವಿ, ನಿರ್ದೇಶಕರು<br>ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ – 580 003 |
| 5. | ಶಿವಚಿಂತನ | : | ಸಂಃ ಮಳಲಿ ವಸಂತ ಕುಮಾರ<br>ಜಗದ್ಗುರು ಸಾರಂಗಧರೇಶ್ವರ.<br>ಪ್ರಕಾಶನ, ಶ್ರೀಶೈಲ |
| 6. | ಬಸವರಾಜ ಕಟ್ಟೀಮನಿ | : | ಮಾಲತಿ ಪಟ್ಟಣಶೆಟ್ಟಿ<br>ಸಾಹಿತ್ಯ ಅಕಾಡೆಮಿ (1999) |
| 7. | ಅಕ್ಕ ಮಹಾದೇವಿ | : | ಗುರುಲಿಂಗ ಕಾಪಸೆ<br>ಸಾಹಿತ್ಯ ಅಕಾಡೆಮಿ (1999) |

8. ಕಟ್ಟೀಮನಿ ಬದುಕು–ಬರಹ : ಸಂ. ದೇಜಗೌ ಮತ್ತು ಸಿ.ಪಿ.ಕೆ
ಗೀತಾ ಬುಕ್ ಹೌಸ್
ಮೈಸೂರು (1999)

9. ವಿಶ್ವಧರ್ಮ ದರ್ಶನ (ಸಂಪುಟ) : ಪ್ರ.ಸಂ. ಪ್ರಭುಶಂಕರ
ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ,
ಮೈಸೂರು

10. ಕಾದಂಬರಿ ವಸ್ತು ಮತ್ತು ತಂತ್ರ : ಗಿರಡ್ಡಿ ಗೋವಿಂದರಾಜ
ಸ್ನೇಹ ಪ್ರಕಾಶನ
ಬೆಂಗಳೂರು – 5೬0 040

11. ಹೆಚ್. ತಿಪ್ಪೇರುದ್ರಸ್ವಾಮಿ : ಸಂ. ಡಾ॥ ಪ್ರದಾಸ್ ಗುರುದತ್ತ
ನವಕರ್ನಾಟಕ ಪ್ರಕಾಶನ
ಬೆಂಗಳೂರು 560 001

12. ಕನ್ನಡ ಸಾಹಿತ್ಯ ಚರಿತ್ರೆ : ಪ್ರ.ಸಂ . ಹಾ.ಮಾ ನಾಯಕ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ (1977)

13. ಸಾಲು ದೀಪಗಳು : ಸಂ. ಆ.ಎಸ್ ಸಿದ್ದಲಿಂಗಯ್ಯ
ಎಂ.ಹೆಚ್ ಕೃಷ್ಣಯ್ಯ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು (366)

14. ಕನ್ನಡ ಸಾಹಿತ್ಯ ಚರಿತ್ರೆ : ರಂ. ಶ್ರೀ ಮುಗಳಿ
ಸಮಾಜ ಪುಸ್ತಕಾಲಯ
ಧಾರವಾಡ

15. ಸಮಗ್ರ ವಚನ ಸಂಪುಟ–5 : ಸಂ. ಡಾ. ಎಂ.ಎಂ.ಕಲಬುರ್ಗಿ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು


~*~*~*~*~*~